# ನಮ್ಮ ಮಾನಸ

ಅಕ್ಟೋಬರ್ 2007
ಸಂಪುಟ : 1 ಸಂಚಿಕೆ : 6

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159 / 32715773*



ಚಂದಾ ವಿವರ

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ





## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ,
ಬೆಂಗಳೂರು – 560 018

ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು

– – –

ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ
ಚಂದಾ ನವೀಕರಣಕ್ಕೆ ಸಂಪರ್ಕಿಸಿ

**ವೆಂ. ವನಜ**
*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ಅವಳ ಅಸ್ತಿತ್ವಕ್ಕೆ ಬೆಲೆ ಸಿಗಲಿ

ಗಂಡು-ಹೆಣ್ಣಿನ ಅನುಪಾತ ಗಾಬರಿಗೊಳ್ಳುವಷ್ಟು ಕುಸಿಯುತ್ತಿರುವುದು ಆತಂಕಕಾರಿಯಾದ ಸಂಗತಿಯಾಗಿದೆ. ಹೆಣ್ಣು ಭ್ರೂಣ ಹತ್ಯೆಯಿಂದಾಗಿ ಹೆಣ್ಣುಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ. ನಮ್ಮ ಸಮಾಜದಲ್ಲಿ ಕಂಡುಬರುತ್ತಿರುವ ಈ ಹಿಮ್ಮುಖ ಚಲನೆಯ ಬಗ್ಗೆ ಮಾನವೀಯ ಕಾಳಜಿಯುಳ್ಳ ಪ್ರತಿಯೊಬ್ಬರೂ ಗಂಭೀರವಾಗಿ ಚಿಂತಿಸಬೇಕಾಗಿದೆ. ಇದು ಸ್ತ್ರೀ ಸಂತತಿಯ ಮೇಲೆ ನಡೆಯುತ್ತಿರುವ ಅಂತಿಮ ಸ್ವರೂಪದ ಹಲ್ಲೆ ಹಾಗೂ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಇದು ಸ್ತ್ರೀಯರ ಬದುಕುವ ಹಕ್ಕನ್ನೇ ಕಸಿದುಕೊಳ್ಳುತ್ತಿದೆ.

ಅಧಿವೃದ್ಧಿ, ಖಾಸಗೀಕರಣ, ಜಾಗತೀಕರಣದ ಸ್ಪಷ್ಟ ಪರಿಣಾಮಗಳನ್ನು ಮಧ್ಯಮವರ್ಗದವರ ಜೀವನಶೈಲಿಯಲ್ಲಿ ಕಾಣಬಹುದು. ಇದರೊಂದಿಗೆ ಪುರುಷಪ್ರಧಾನ ಸಂಸ್ಕೃತಿಯ ಬೇರುಗಳು ನಮ್ಮ ಸಮಾಜದಲ್ಲಿ ಆಳವಾಗಿ ಬೇರೂರಿವೆ. ಮಹಿಳೆಯರ ಸ್ಥಾನಮಾನದಲ್ಲಿ ಅಲ್ಪಸ್ವಲ್ಪ ಬದಲಾವಣೆಯಾಗಿದೆ ಅನ್ನುತ್ತಲೇ, ಶೋಷಣೆಯ ಇನ್ನೊಂದು ಮುಖ ನಮ್ಮೆದುರಿಗೆ ಧುತ್ತೆಂದು ನಿಲ್ಲುತ್ತದೆ.

ನಮ್ಮ ದೇಶದ ಎಲ್ಲಾ ರಾಜ್ಯಗಳಲ್ಲಿಯೂ ಹೆಣ್ಣುಭ್ರೂಣ ಹತ್ಯೆಯ ವ್ಯವಸ್ಥಿತ ಜಾಲವನ್ನು ಕಾಣಬಹುದು. ಹರ್ಯಾಣ, ಪಂಜಾಬ್, ಗುಜರಾತ್ ರಾಜ್ಯಗಳಲ್ಲಿ ಹೆಣ್ಣು ಭ್ರೂಣ ಹತ್ಯೆಯು ತೀವ್ರ ಪ್ರಮಾಣದಲ್ಲಿ ಹೆಚ್ಚುತ್ತಿದೆ. ಪಂಜಾಬ್ ನಮ್ಮ ದೇಶದಲ್ಲಿಯೇ ಹೆಚ್ಚು ಸಮೃದ್ಧಿಯನ್ನು ಹೊಂದಿದ ರಾಜ್ಯ; ಆರ್ಥಿಕವಾಗಿ ಹೆಚ್ಚು ಪ್ರಬಲವಾದ ರಾಜ್ಯ. ಪಂಜಾಬಿನ ಪಾಟೀಯಾಲ ಜಿಲ್ಲೆಯ ಒಂದು ಖಾಸಗೀ ಆಸ್ಪತ್ರೆಯ ಹತ್ತಿರದ ಬಾವಿಯಲ್ಲಿ ಸುಮಾರು ೫೦ಕ್ಕೂ ಹೆಚ್ಚು ಹೆಣ್ಣು ಭ್ರೂಣಗಳು ಕಂಡುಬಂದಿದ್ದವು. ಅಂಕಿ-ಅಂಶವೊಂದರ ಪ್ರಕಾರ ಪಂಜಾಬ್‌ನಲ್ಲಿ ೦-೬ ವರ್ಷದ ೧೦೦೦ ಹುಡುಗರಿಗೆ ಹೆಣ್ಣುಮಕ್ಕಳು ಕೇವಲ ೭೯೩. ಇತರ ದೇಶಗಳಲ್ಲಿ ೧೦೦ ಗಂಡುಶಿಶುಗಳಿಗೆ ೧೦೫ ಹೆಣ್ಣುಶಿಶುಗಳ ಜನನವಾಗುತ್ತಿದೆ. ಆದರೆ ಒಟ್ಟಾರೆಯಾಗಿ ಭಾರತದಲ್ಲಿ ೧೦೦ ಗಂಡುಮಕ್ಕಳಿಗೆ ಹೆಣ್ಣುಮಕ್ಕಳ ಸಂಖ್ಯೆ ೯೩ಕ್ಕೆ ಕುಸಿದಿದೆ.

ಹೆಣ್ಣುಭ್ರೂಣ ಹತ್ಯೆಯ ಕುರಿತು ಪ್ರಚಾರವಿಧಾನ, ವೈಜ್ಞಾನಿಕ ತಂತ್ರಜ್ಞಾನವನ್ನು ಬಳಸುವ ವಿಧಾನ ಮುಂತಾದವು ಪುರುಷಪ್ರಧಾನ ಸಮಾಜವು ಹೆಣ್ಣಿನ ಜೀವಕ್ಕೆ ನೀಡುವ ಬೆಲೆಯನ್ನು ನಿರ್ಧರಿಸುತ್ತಿದೆ. ಸಂತೆಗಳಲ್ಲಿ ಮಾರ್ಕೆಟ್‌ಗಳಲ್ಲಿ "ಇಂದು ಕಡಿಮೆ ಖರ್ಚು ಮಾಡಿ ನಾಳೆ ಲಕ್ಷಾಂತರ ರೂಗಳನ್ನು ಉಳಿಸಿ" ಎಂಬಂತಹ ಅಗ್ಗದ ಪ್ರಚಾರ ಪರೋಕ್ಷವಾಗಿ ಮಾಡುತ್ತಾ ಜನರನ್ನು ಪ್ರಚೋದಿಸಲಾಗುತ್ತಿದೆ. (ಕಡಿಮೆ ಖರ್ಚಿನಲ್ಲಿ ಸ್ಕ್ಯಾನಿಂಗ್ ಮಾಡಿಸಿ ಭ್ರೂಣದ ಲಿಂಗ ಪತ್ತೆ ಮಾಡಿ, ಹೆಣ್ಣು ಭ್ರೂಣವನ್ನು ನಿವಾರಿಸಿದರೆ ಮುಂದೆ ಹಣ ಉಳಿಸಬಹುದೆಂಬುದರ ಸೂಚನೆ) ಗಂಡುಮಕ್ಕಳ ಮೇಲಿನ ಅಪಾರವಾದ ವ್ಯಾಮೋಹ, ವರದಕ್ಷಿಣೆ ಸಮಸ್ಯೆ ಹೆಣ್ಣುಮಕ್ಕಳು ಎದುರಿಸುವ ಹೆಣ್ಣುಭ್ರೂಣ ಹತ್ಯೆಗೆ ಮೇಲ್ನೋಟದ ಕಾರಣಗಳೆಂದು ಕಾಣಿಸುತ್ತದೆ.

ಕರ್ನಾಟಕದಲ್ಲಿಯೂ ಹೆಣ್ಣುಭ್ರೂಣ ಹತ್ಯೆಯ ವ್ಯವಸ್ಥಿತ ಜಾಲವನ್ನು ನಾವು ಕಾಣಬಹುದು. ಮಂಡ್ಯ ಜಿಲ್ಲೆ ಇದಕ್ಕೆ ಉತ್ತಮ ನಿದರ್ಶನ. ಉತ್ತಮ ನೀರಾವರಿ ವ್ಯವಸ್ಥೆ, ಹೆಚ್ಚು ಸಮೃದ್ಧಿ ಹೊಂದಿದ ಪ್ರದೇಶಗಳಲ್ಲಿಯೂ ಹೆಣ್ಣು ಭ್ರೂಣ ಹತ್ಯೆ ಹೆಚ್ಚುತ್ತಿರುವುದು ಆತಂಕಕಾರಿಯಾದ ಸಂಗತಿಯಾಗಿದೆ. ಸುಮಾರು ೬೦ಕ್ಕೂ ಹೆಚ್ಚು ಆಸ್ಪತ್ರೆಗಳು ಹಣದ ದುರಾಸೆಯಿಂದ ತೆರೆಮರೆಯಲ್ಲಿ ಈ ಕೃತ್ಯವನ್ನು ನಡೆಸುತ್ತಿದ್ದುದು ಬೆಳಕಿಗೆ ಬಂದಿದೆ. ಮಂಡ್ಯ ಜಿಲ್ಲೆಯಲ್ಲಿ ೧೦೦೦ ಪುರುಷರಿಗೆ ೯೩೪ ಮಹಿಳೆಯರಿದ್ದಾರೆ !

ಇತ್ತೀಚೆಗೆ ಬೆಂಗಳೂರಿನಲ್ಲಿ ಚೀಲದಲ್ಲಿ ಎಸೆಯಲಾದ ಭ್ರೂಣಗಳು, ಜಕ್ಕರಾಯನ ಕೆರೆಯಲ್ಲಿ ಪತ್ತೆಯಾದ ಭ್ರೂಣಗಳು ಇವು ಕೆಲವು ನಿದರ್ಶನಗಳು ಮಾತ್ರ. ಕೇವಲ ಬೆರಳೆಣಿಕೆಯಷ್ಟು ಪ್ರಕರಣಗಳು ಮಾತ್ರ ಬೆಳಕಿಗೆ ಬರುತ್ತಿವೆ. ಆಕಸ್ಮಿಕವಾಗಿ ಬೆಳಕಿಗೆ ಬಂದರೂ ಕೆಲವು ವ್ಯಕ್ತಿಗಳ 'ಪ್ರಭಾವ'ದಿಂದ ಮುಚ್ಚಿ ಹೋಗುತ್ತಿವೆ. ಸುಳ್ಳು ಕಾರಣಗಳನ್ನು ಕೊಟ್ಟು ತನಿಖೆಯ ದಾರಿಯನ್ನು ತಪ್ಪಿಸಲಾಗುತ್ತಿದೆ.

೧೯೯೪ರಲ್ಲಿ ಕೇಂದ್ರ ಸರ್ಕಾರದಿಂದ ಭ್ರೂಣ ಲಿಂಗ ಪತ್ತೆಯನ್ನು ನಿಷೇಧಿಸಲಾಗಿದ್ದರೂ ಕಾನೂನಿನ ಹಿಡಿತವನ್ನು ತಪ್ಪಿಸಿಕೊಳ್ಳಲು ಆಸ್ಪತ್ರೆಗಳು, ವೈದ್ಯರು ಹಾಗೂ ನಕಲಿ ವೈದ್ಯರು ಹಲವಾರು ರೀತಿಯ (ಕು)ತಂತ್ರವನ್ನು ಬಳಸುತ್ತಿದ್ದಾರೆ. ಗಂಡು ಮಗುವಾದರೆ ಹಸಿರು ಸಿಗ್ನಲ್ ಹಾಗೂ ಕೃಷ್ಣನ ಚಿತ್ರವನ್ನು, ಹೆಣ್ಣು ಮಗುವಾದರೆ ಕೆಂಪು ಸಿಗ್ನಲ್ (ಡೇಂಜರ್?) ಹಾಗೂ ರಾಧೆಯ ಚಿತ್ರವನ್ನು ತೋರಿಸುವ ವಿಧಾನವನ್ನು ಅಳವಡಿಸಿಕೊಳ್ಳುತ್ತಿವೆ. ಕರ್ನಾಟಕ ಸರ್ಕಾರ ಕಾನೂನನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಉದ್ದೇಶದಿಂದ ಒಂದು ಪ್ರತ್ಯೇಕ ಘಟಕವನ್ನೇ ಸ್ಥಾಪಿಸಲು ನಿರ್ಧರಿಸಿರುವುದು ಸ್ವಾಗತಾರ್ಹ ಹೆಜ್ಜೆಯಾಗಿದೆ.

ಗಂಡು-ಹೆಣ್ಣಿನ ಅನುಪಾತದಲ್ಲಿ ಕಂಡುಬರುವ ವ್ಯತ್ಯಾಸ ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ಬಹುದೊಡ್ಡ ಸವಾಲಾಗಿದೆ. ಈಗಾಗಲೇ ಇದರ ಪರಿಣಾಮಗಳನ್ನು ಹಲವಾರು ರಾಜ್ಯಗಳಲ್ಲಿ ಕಾಣಬಹುದಾಗಿದೆ. ಹೆಣ್ಣುಮಕ್ಕಳ ಅಪಹರಣ, ಮಾರಾಟ ಸಾಮಾನ್ಯವಾದ ದೈನಂದಿನ ಸಂಗತಿಗಳಾಗಿವೆ. ದಕ್ಷಿಣ ರಾಜ್ಯಗಳಿಂದ ಹೆಣ್ಣುಮಕ್ಕಳನ್ನು ಕೊಂಡುಕೊಳ್ಳುವ, ಆಮಿಷವೊಡ್ಡಿ ಮದುವೆಯಾಗುವುದೇ ಮೊದಲಾದ ಪ್ರವೃತ್ತಿಗಳು ಹೆಚ್ಚುತ್ತಿವೆ. ಒಂದು ಹೆಣ್ಣನ್ನು ಮದುವೆಯಾಗಿ ಆತನ ಅಣ್ಣತಮ್ಮಂದಿರೆಲ್ಲಾ ಬಳಸುವುದರ ಮೂಲಕ ಆಕೆಯನ್ನು ಅಮಾನುಷವಾಗಿ ಶೋಷಿಸಿ, ಬಲಿಪಶುವನ್ನಾಗಿ ಮಾಡಲಾಗುತ್ತಿದೆ. ಆಕೆ ನಿಕೃಷ್ಟವಾಗಿ ಬದುಕು ಸಾಗಿಸುವುದರೊಂದಿಗೆ, ಮಾರಾಟದ ಸರಕಾಗಿ ವ್ಯವಸ್ಥಿತವಾದ ಜಾಲದಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದಾಳೆ.

ನಮ್ಮ ದೇಶದ ಎಲ್ಲ ಜನಾಂಗದ ಜನರಲ್ಲಿ ಸಂಪ್ರದಾಯಗಳು, ಸಂಸ್ಕೃತಿ, ಪದ್ಧತಿಗಳು ಪುರುಷಪ್ರಧಾನ ಮೌಲ್ಯಗಳನ್ನು ವಿಜೃಂಭಿಸುತ್ತವೆ. ಈ ಮೌಲ್ಯಗಳು ಇಂದಿನ ಜಾಗತೀಕರಣದ ಆರ್ಥಿಕ ಪರಿಸ್ಥಿತಿಯ ಪರಿಣಾಮವಾದ ಭೋಗದ ಸಂಸ್ಕೃತಿಯೊಂದಿಗೆ ತಳುಕು ಹಾಕಿಕೊಂಡಿವೆ. ಯುವ ಜನತೆಯಲ್ಲಿ ವಸ್ತು ವ್ಯಾಮೋಹ, ಕಡಿಮೆ ಅವಧಿಯಲ್ಲಿ ದಿಢೀರೆಂದು ಹಣಗಳಿಸುವ ಗೀಳು ಬೆಳೆಯುತ್ತಿದೆ. ಶ್ರಮ ಸಂಸ್ಕೃತಿ ನಾಶವಾಗುತ್ತಿದೆ. ಗಂಡು ಕೇಳಿದ್ದನ್ನೆಲ್ಲಾ ಕೊಡುವ ಮನೋಭಾವನೆ, ದುಂದುವೆಚ್ಚದ ವೈಭವಪೂರಿತ ವಿವಾಹಗಳು ಇವೆಲ್ಲವೂ ಒಟ್ಟಿಗೆ ಸೇರಿ ಹೆಣ್ಣಿನ ಬದುಕುವ ಹಕ್ಕನ್ನೇ ಕಿತ್ತುಕೊಳ್ಳುತ್ತಿವೆ. ಹೆಣ್ಣು ಕುಟುಂಬಕ್ಕೆ ಹೊರೆಯಾಗಿದ್ದಾಳೆ, ಶಾಪವಾಗಿದ್ದಾಳೆ, ಆದ್ದರಿಂದ ಆಕೆ ಕಣ್ಣು ಬಿಡುವುದರೊಳಗಾಗಿ ಆಕೆಯನ್ನು ಹೊಸಕಿ ಹಾಕುವ ಅಮಾನುಷ ಪ್ರವೃತ್ತಿ ಇಂದು ಸಹಜವೆನ್ನುವಷ್ಟು ಒಪ್ಪಿತವಾಗುತ್ತಿರುವುದು ಒಂದು ದುರಂತದ ಸಂಗತಿ.

ಭ್ರೂಣ ಲಿಂಗಪತ್ತೆಯ ವೈಜ್ಞಾನಿಕ ತಂತ್ರಜ್ಞಾನದ ದುರ್ಬಳಕೆಯ ವಿರುದ್ಧ ಮಹಿಳಾ ಸಂಘಟನೆಗಳು, ಸ್ವಯಂ ಸೇವಾ ಸಂಸ್ಥೆಗಳು ವ್ಯವಸ್ಥಿತವಾದ ಹೋರಾಟವನ್ನು ನಡೆಸುತ್ತಲೇ ಬಂದಿವೆ. ಈ ಸಮಸ್ಯೆಯು ನಮ್ಮ ವ್ಯವಸ್ಥೆಯೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ಮತ್ತಷ್ಟು ಸಂಕೀರ್ಣತೆಯನ್ನು ಪಡೆಯುತ್ತಿದೆ. ಹೆಣ್ಣುಭ್ರೂಣ ಹತ್ಯೆ ಮಾಡುವ ಕೇಂದ್ರಗಳ ಮೇಲೆ ದಾಳಿ ನಡೆಸಿ ತಾತ್ಕಾಲಿಕವಾಗಿ ಮುಚ್ಚಿಸಿದ್ದರೂ ರಾಜಕೀಯ ಪ್ರಭಾವವುಳ್ಳ ವ್ಯಕ್ತಿಗಳ ಹಾಗೂ ಹಣದ ಪ್ರಭಾವದಿಂದಾಗಿ ಮತ್ತೆ ಪ್ರಾರಂಭವಾದ ನಿದರ್ಶನಗಳು ಸಾಕಷ್ಟಿವೆ. ಕಾನೂನನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವಂತಾಗಬೇಕು. ಜನಸಾಮಾನ್ಯರು, ಮಹಿಳೆಯರು ಈ ಹೋರಾಟದೊಂದಿಗೆ ಕೈ ಜೋಡಿಸಿದರೆ ಮಾತ್ರ ಸಮಸ್ಯೆ ಪರಿಹಾರವಾಗಬಹುದು. ಮುಖ್ಯವಾಗಿ ಆಕೆಯ ಬಗೆಗಿರುವ ಧೋರಣೆಯಲ್ಲಿ ಮೂಲಭೂತವಾದ ಬದಲಾವಣೆಯಾಗಬೇಕಾಗಿದೆ. ಆಕೆಯ ಅಸ್ತಿತ್ವಕ್ಕೆ ಬೆಲೆ ನೀಡಬೇಕಾಗಿದೆ.

* * *

ಇತ್ತೀಚೆಗೆ ಪ್ರವಾಸೋದ್ಯಮ ಇಲಾಖೆ ಸ್ವದೇಶೀ ಹಾಗೂ ವಿದೇಶೀ ಪ್ರವಾಸಿಗರಿಗೆ ಅಗತ್ಯ ವ್ಯವಸ್ಥೆಗಳನ್ನು ಮನೆಯಲ್ಲೇ ಮಾಡುವುದರ ಮೂಲಕ ಮಹಿಳೆಯರು ಪ್ರವಾಸೋದ್ಯಮವನ್ನು ಯಶಸ್ವೀ ಉದ್ದಿಮೆಯನ್ನಾಗಿ ಪರಿಗಣಿಸಬೇಕೆಂದು ಕರೆ ನೀಡಿದೆ. ಮನೆಗೆ ಬರುವ ಅತಿಥಿ ಕೇವಲ ಊಟೋಪಚಾರದ ಆತಿಥ್ಯ ಮಾತ್ರ ಸ್ವೀಕರಿಸಿ ತೆರಳುತ್ತಾನೆಂಬುದು ಕೇವಲ ಭ್ರಮೆ.

ಜಾಗತೀಕರಣದ ಈ ಸಂದರ್ಭದಲ್ಲಿ ಪ್ರವಾಸೋದ್ಯಮ ಮಹಿಳೆಯರನ್ನು ಲೈಂಗಿಕ ಶೋಷಣೆಯತ್ತ ತಳ್ಳುವ ವ್ಯವಸ್ಥಿತ ಜಾಲವಾಗಿ ಬಿಡುವ ಅಪಾಯ ಇದೆ.

ಮೂರನೇ ಜಗತ್ತಿನ ಥೈಲ್ಯಾಂಡ್, ಮಲೇಷಿಯಾ ಮುಂತಾದ ಪುಟ್ಟ ದೇಶಗಳಲ್ಲಿ ಆಗುತ್ತಿರುವ ಹಳವಂಡಗಳು ಇದಕ್ಕೆ ನಿದರ್ಶನ. ಮಸಾಜ್ ಪಾರ್ಲರ್‌ಗಳು, ಆರೋಗ್ಯಧಾಮಗಳು, ಅತಿಥಿಗೃಹಗಳು, ಹೈವೇ ದಾಬಾಗಳಲ್ಲಿ ಮಹಿಳೆಯರ ಲೈಂಗಿಕ ಶೋಷಣೆ ಆಗುತ್ತಿರುವುದು ಈಗಾಗಲೇ ದೃಢಪಟ್ಟಿದೆ. ಈ ಹಿನ್ನೆಲೆಯಲ್ಲಿ ಪ್ರವಾಸೋದ್ಯಮದ ಈ ಹೊಸ ಯೋಜನೆ ಸಭ್ಯತೆಯ ಮುಸುಕಿನಲ್ಲಿ ಮಹಿಳೆಯರ ಲೈಂಗಿಕ ಶೋಷಣೆ ನಡೆಯಲು ಕಾರಣವಾಗಬಹುದು. ಈ ವಿಚಾರದಲ್ಲಿ ಸರ್ಕಾರ ಈಗಾಗಲೇ ಇಂತಹ ಯೋಜನೆ ಅಳವಡಿಸಿದ ಇತರ ದೇಶಗಳ ಸಮಸ್ಯೆಗಳ ಅಧ್ಯಯನ ನಡೆಸುವುದು ವಿಹಿತ ಮತ್ತು ದುಡುಕಿನ ನಿರ್ಧಾರಕ್ಕೆ ಬರದೆ ಮರುಚಿಂತನೆ ಮಾಡುವುದು ಅತ್ಯಗತ್ಯ.

# ಟೆಂಟ್‌ಲ್ಯಾಂಡ್ ಸ್ಟೋರಿ

● ಮಮತಾ ಜಿ. ಸಾಗರ



ಬಟ್ಟೆಯ ಟೆಂಟುಗಳು..

ಬಣ್ಣ ಬಣ್ಣದ ಬುರಖಾದ ಹಾಗೆ ಕಾಣೋ ಬಟ್ಟೆಯ ಟೆಂಟುಗಳು.....

ರಂಗದಮೇಲೆ ಜೀವಂತವಾಗಿ ಓಡಾಡುತ್ತ ಮಾತಾಡೋ ಕಪ್ಪು, ಕೆಂಪು, ನೀಲಿ, ಹಳದಿ ಟೆಂಟುಗಳು.......

ಇಸ್ಲಾಮ್ ರಿಪಬ್ಲಿಕ್ಕಿನಿಂದ ವಲಸೆಬಂದ ಮಹಿಳೆಯರನ್ನು ಕಲೆಹಾಕಿ ಟೆಹೆರಾನಿನ ಡ್ರಮ್ಯಾಟಿಕ್ ಆರ್ಟ್ ಸೆಂಟರ್ ಹಾಗು ಗೋಥೆ ಇನ್ಸ್ಟಿಟ್ಯೂಟಿನ ಸಹಾಯದಿಂದ ಹೆಲೆನಾ ವಾಲ್ಡ್‌ಮನ್ ಅವರು ನಿರ್ದೇಶಿಸಿರುವ ನೃತ್ಯ ನಾಟಕ Return to Sender ಇತ್ತೀಚೆಗೆ, ರಂಗಶಂಕರದಲ್ಲಿ ಪ್ರದರ್ಶನಗೊಂಡಿತು. ತಮ್ಮ ದೇಶದಿಂದ ಗಡಿಪಾರಾಗಿರುವ ಆರು ಇರಾನಿಯನ್ ಮಹಿಳೆಯರು ಅಭಿನಯಿಸಿರುವ ನಾಟಕವಿದು. ನಾಟಕ ಹಾಗು ಒಂದು ಸಾಮಾಜಿಕ ಸತ್ಯದ ಹಾಸುಹೊಕ್ಕು ಈ ಪ್ರದರ್ಶನ.

ಈ ಗಡಿಪಾರಾದವರಿಗೆ ಬೆಚ್ಚಗಿನ ಮನೆ ಎಂದೂ ನನಸಾಗದ ಕನಸಾಗೇ ಉಳಿದರೂ ಸಹ, ಬೇರೂರಲಾಗದ ಹೊಸ ನೆಲದಲ್ಲಿ, ಆ ನೆಲದ ಬಿಸಿ ಬಿಚ್ಚಿಡುವ ಅನಿಶ್ಚಿತ ಬದುಕಲ್ಲಿ, ತಮ್ಮಂಥವರೇ ಬಿಟ್ಟು ಹೋದ ಈ ಟೆಂಟುಗಳೇ ಮನೆಗಳು. ಟೆಂಟಿನ ಜೊತೆ ಬಳುವಳಿಯಾಗಿ ಬರುತ್ತವೆ ದುಗುಡ ದುಮ್ಮಾನಗಳು, ಕೋಪತಾಪಗಳು, ಕಷ್ಟ ಕಾರ್ಪಣ್ಯಗಳು. ಇದೆಲ್ಲದರ ಜೊತೆ ಮೈಗೂಡಿಸಿಕೊಂಡ ಟೆಂಟುಗಳು ಈಗ ಕಳಚಲಾರದ ಕವಚ. ಆಚೀಚಿನ ಸಂಸ್ಕೃತಿಗಳ ನಡುವೆ ಬದುಕನ್ನೇ ಡೋಲಾಯಮಾನವಾಗಿಸಿರುವ ಪರಿಸ್ಥಿತಿಯಲ್ಲಿ ತಮ್ಮ ಅಸ್ತಿತ್ವಕ್ಕಾಗಿ, ಅಸ್ಮಿತೆಗಾಗಿ, ಕನಸುಗಳಿಗಾಗಿ ಎತ್ತುವ ಧ್ವನಿಯ ರೂಪಕವಾಗಿ ನಾಟಕದುದ್ದಕ್ಕೂ ಮೂಡಿಬರುತ್ತವೆ ಈ ಟೆಂಟುಗಳು. ವಿಕಸಿತ ದೇಶಗಳ ರಾಜಕೀಯ ಹಾಗು ಸಾಮಾಜಿಕ ಪಾಲಿಟಿಕ್ಸಿನಲ್ಲಿ ಸದಾ ಮಾರ್ಜಿನಲೈಸ್ಡ್ ಆಗೇ ಉಳಿವ ಗುಂಪುಗಳ ಕಥೆ ಇದು.

ಇಲ್ಲಿ ಈ ಹೆಂಗಸರ ದೇಹಗಳು ಟೆಂಟಿನೊಳಗೆ ಸಮೀಕರಿಸಿ ಹೋಗುತ್ತವೆ. ಟೆಂಟೇ ದೇಹವಾಗಿ.. ದೇಹವೇ ಟೆಂಟಾಗಿ... ಒಂದರ ಕೆಲಸ ಇನ್ನೊಂದು ಮಾಡುತ್ತಾ ಎಷ್ಟೋ ಸಾರಿ ಎರಡೂ ಬೇರೆಯಲ್ಲವೇನೋ ಅನ್ನುವಂಥಾ ಫಿಲಸಾಫಿಕಲ್ ಸ್ಟೇಟ್ಮೆಂಟನ್ನು ದೃಶ್ಯ ರೂಪದಲ್ಲಿ ನೋಡುತ್ತಿದ್ದೀವೇನೋ ಎಂಬ ಅನುಭವ ಆಗಿಬಿಡುತ್ತದೆ. ಉದಾಹರಣೆಗೆ, ಕಪ್ಪು ಟೆಂಟಿನೊಳಗಿಂದ ಮೆಲ್ಲಗೆ ಕೊಂಚ ಕೊಂಚವೇ ಮುಂದೆ ಸರಿದು ಕೆಂಪು ಚೆಲ್ಲುತ್ತ.. ಹರಿಯುತ್ತಾ... ಪುಳಕ್ ಎಂದು ಇದ್ದಕ್ಕಿದ್ದಹಾಗೆ ಈಚೆ ಬಿದ್ದು ಎದ್ದು ನಿಲ್ಲುವ ಕೆಂಪು ಟೆಂಟಿನ ದೃಶ್ಯವಂತೂ ಪ್ರಸವದ ದೃಶ್ಯವನ್ನೇ ರಂಗದ ಮೇಲೆ ಕಟ್ಟುತ್ತದೆ.

ತಮ್ಮದಲ್ಲದ ನೆಲದಲ್ಲಿ, ವಿವಿಧ ರೂಪ ಹೊತ್ತು ಸದಾ ಬೆನ್ನಟ್ಟಿ ಬರುವ ಭಯ. ಆ ಭಯದಿಂದ ದಿಕ್ಕು ಕಾಣದೇ ಓಡುವ, ಆ ಭಯವನ್ನು ನಿಯಂತ್ರಿಸಿಕೊಳ್ಳುವುದಕ್ಕಾಗಿ ಅವರು ಕಂಡುಕೊಳ್ಳುವ ವಿಧಾನಗಳನ್ನು ದೃಶ್ಯ ರೂಪದಲ್ಲಿ ತುಂಬಾ ಯಶಸ್ವಿಯಾಗಿ ಈ ನಾಟಕ ನಮ್ಮೆದುರಿಗಿಡುತ್ತದೆ.

ಟೆಂಟುಗಳನ್ನು ರಂಗ ಸಜ್ಜಿಕೆಯಾಗಿ ಬಳಸಿಕೊಳ್ಳುವುದರ ಜೊತೆಗೆ ರಂಗದಮೇಲೆ ವಿಶೇಷವಾಗಿ ಕೆಲವು ಚಿತ್ರಗಳನ್ನು ಪ್ರೊಜೆಕ್ಟ್ ಮಾಡಲಾಗುತ್ತದೆ. ಪ್ರೊಜೆಕ್ಟ್ ಮಾಡಿದ ದೃಶ್ಯಗಳು, ಫೋಟೋಗಳು, ಪತ್ರದ ಲಿಖಿತ ಸಾಲುಗಳು ಕೆಲವೊಮ್ಮೆ ಸ್ವತಂತ್ರವಾಗಿ, ಇನ್ನು ಕೆಲವೊಮ್ಮೆ ಒಂದರಮೇಲೊಂದು ಓವರ್‌ಲ್ಯಾಪಾಗಿ ಬರುವುದರಿಂದ ರಂಗದ ಮೇಲೆ ಹೇಳಬೇಕಾದ್ದನ್ನು ಇನ್ನೂ ಹೆಚ್ಚಿನ ಉತ್ತಮ ಇಫೆಕ್ಟಿನ ಜೊತೆ ಹೇಳಲು ಸಾಧ್ಯವಾಗಿದೆ. ಉತ್ತಮ ಸಂಗೀತ ಹಾಗು ಪ್ರಬಲವಾದ acrobatic ನೃತ್ಯ/ದೃಶ್ಯಗಳಿಂದ ಕೂಡಿದ ಈ ನಾಟಕದಲ್ಲಿ ಪ್ರೇಕ್ಷಕರಿಗೆ ತಲುಪಿಸ ಬೇಕಾದ ವಿಷಯವನ್ನು ಅದರ ಮುದ್ರೆಯ ಸಹಿತ ಯಶಸ್ವಿಯಾಗಿ ತಲುಪಿಸಿಕೊಡಲಾಗಿದೆ. ಆದರೆ, ದೃಶ್ಯಗಳ ಜೋಡಣೆಯಲ್ಲಿ ಆರಂಭದಿಂದ ಅಂತ್ಯದವರೆಗೂ ಕಂಡುಬರುವ ಸಿಮಿಟ್ರಿ ಸ್ವಲ್ಪ ಮೊನಾಟನಸ್ ಅನ್ನಿಸುತ್ತದೆ. ಈ ಸಿಮಿಟ್ರಿಯನ್ನು ಮುರಿವ ಪ್ರಯತ್ನ ಮಾಡಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತೇನೋ. ದಡಬಡನೆ ಬಹಳಾ ಫೋರ್ಸ್‌ಫುಲ್ ಆಗಿ ಆಗಿಹೋಗುವ ಈ ನೃತ್ಯ ನಾಟಕದಲ್ಲಿ ಅದರ ನಾಟಕ ಹಾಗು ನೃತ್ಯಗಳ ಡೈಮೆನ್ಷನ್ನಿಗಿಂತ ಹೆಚ್ಚಾಗಿ ನಾಟಕದ ಉದ್ದೇಶ ಮುಖ್ಯ ಭೂಮಿಕೆಯನ್ನು ಪಡೆದುಕೊಳ್ಳುತ್ತದೆ. ಈ ಪರ್‌ಫಾರ್ಮೆನ್ಸಿಗೆ ಅದರ ಅವಶ್ಯಕತೆಯೂ ಇದೆ ಅನ್ನುವುದು ನಿಜ. ಮೂಲತಃ Letter from Tentland ಆಗಿದ್ದ ಈ ನಾಟಕ ಈಗ Return to Sender ಎಂಬ ಹೆಸರನ್ನು ಮತ್ತು ಉದ್ದೇಶವನ್ನೂ ಮೈಗೂಡಿಸಿಕೊಂಡು ಎಕ್ಸೈಲಿನಲ್ಲಿರುವ ಮಹಿಳೆಯರ ಕಥೆಗಳನ್ನಾಧರಿಸಿ, ಈಗ ಎಕ್ಸೈಲಿನಲ್ಲಿರುವ ಆರು ಮಹಿಳೆಯರಿಂದ ಅಭಿನಯಿಸಲ್ಪಟ್ಟಿರುವ ವಿಶೇಷ ನಾಟಕ. ಬಹುಕಾಲ ನೆನಪಿನಲ್ಲಿದ್ದು ಕಾಡುವ ಅನುಭವ ಕೊಟ್ಟಿದೆ. ❑



# ಹೊಸಕಾಲದ ಬರಹಗಾರ್ತಿಯರಿಂದ 'ಮಾದರಿ'ಗಳು ಇನ್ನೂ ಬಂದಿಲ್ಲ

● ಕೆ. ಸತ್ಯನಾರಾಯಣ

*ನಮ್ಮ ನಡುವಿನ ಸಂವೇದನಾಶೀಲ ಬರಹಗಾರ ಕೆ. ಸತ್ಯನಾರಾಯಣ ಅವರು ಸ್ತ್ರೀಯರ ಬರಹಗಳ ಬಗ್ಗೆ ಮುಖ್ಯವಾದ ಕೆಲವು ಪ್ರಶ್ನೆಗಳನ್ನೆತ್ತಿದ್ದಾರೆ. ಪ್ರಜ್ಞಾವಂತರ ಒಂದು ವಲಯದಲ್ಲಿ ಇಂಥ ಚರ್ಚೆ ಈಗೀಗ ಹೆಚ್ಚಾಗಿ ಕೇಳಿಬರುತ್ತಿದೆ. ಕೆ. ಸತ್ಯನಾರಾಯಣ ಅವರು ಹೇಳುತ್ತಿರುವ ಹೂವಯ್ಯ, ರಾಮ, ಲಚ್ಚ, ಗುತ್ತಿ, ಚೋಮ ಮಾದರಿಗಳು ಬರಹಗಾರ್ತಿಯರಿಂದ ಮೂಡಿ ಬಂದಿಲ್ಲ ಎಂಬ ಪ್ರಶ್ನೆ ಗಂಭೀರವಾದುದು. ಮಾದರಿಗಳನ್ನು ಗುರುತಿಸಿಲ್ಲ, ಲಕ್ಷಿಸಿಲ್ಲ, ಬಳಸಿಲ್ಲ ಎನ್ನುವುದು ಸಹಜ ಉತ್ತರ. ಅದಕ್ಕಿಂತ ಭಿನ್ನವಾಗಿ ಈ ಕ್ಷೇತ್ರದಲ್ಲಿ ವಿಶೇಷ ಅಧ್ಯಯನ ನಡೆಸಿರುವ ಡಾ. ಪಿ. ಚಂದ್ರಿಕಾ ವಿವರಿಸುತ್ತಾರೆ. ಈ ಸಂವಾದವನ್ನು ಆರೋಗ್ಯಕರವಾಗಿ, ಗಂಭೀರವಾಗಿ ನೀವು ಬೆಳೆಸಿ. 'ನಮ್ಮ ಮಾನಸ'ದಲ್ಲಿ ಮುಕ್ತವಾದ ಚರ್ಚೆ ಆಗಲಿ.*

*– ಸಂ.*

ಇಪ್ಪತ್ತನೆ ಶತಮಾನವು ಮುಗಿಯಿತು. ಸ್ತ್ರೀವಾದ ಮತ್ತು ಸ್ತ್ರೀ ಸಂವೇದನೆಯ ಮಾತುಗಳನ್ನು ಕೇಳುತ್ತಾ, ಓದುತ್ತಾ ಕೂಡ ನಾವು ಕೆಲವು ದಶಕಗಳನ್ನು ಕಳೆದಿದ್ದೇವೆ. ಹೊಸ ಕಾಲದ ಹೆಂಗಸಿನಿಂದ ನಾವು ನಿರೀಕ್ಷಿಸುವುದಾದರೂ ಏನನ್ನು? ಹೊಸಕಾಲದ ಹೆಂಗಸೆಂದರೆ ಆಕೆಯೇನು ದೂರಲೋಕದ ಅದೃಶ್ಯ ಹೆಂಗಸಲ್ಲ. ನಾವೆಲ್ಲರೂ ನಮ್ಮ ನಮ್ಮ ಹೆಂಡತಿಯರಿಂದ, ತಂಗಿಯರಿಂದ, ಗೆಳತಿಯರಿಂದ, ಸಹೋದ್ಯೋಗಿಗಳಿಂದ, ಅತ್ತಿಗೆಯರಿಂದ, ಅತ್ತೆಯರಿಂದ ನಿರೀಕ್ಷಿಸುತ್ತಿರುವುದಾದರೂ ಏನನ್ನು ? ಈ ಎಲ್ಲ ನಿರೀಕ್ಷೆಗಳ – ಆಕಾಂಕ್ಷೆಗಳ ಸಾಕಾರ ರೂಪವಾಗಿ ನಮ್ಮ ಲೇಖಕಿಯರು, ಲೇಖಕರು ಸೃಷ್ಟಿಸುತ್ತಿರುವ ಪಾತ್ರ ಪ್ರಪಂಚವಾದರೂ ಎಂತಹುದು ? ಈ ಪುಟ್ಟ ಟಿಪ್ಪಣಿ ಇಂತಹ ಪ್ರಶ್ನೆಗಳನ್ನು ಕುರಿತದ್ದು.

ಕಥನ ಸಾಹಿತ್ಯದಲ್ಲಿ, ವಿಶೇಷವಾಗಿ ಕಾದಂಬರಿ ಪ್ರಕಾರದಲ್ಲಿ ತುಂಬಾ ದೊಡ್ಡ ಪ್ರತಿಭೆಗಳಿಗೆ ಮನುಷ್ಯ ಸ್ವಭಾವದಲ್ಲಾಗುವ ಪಲ್ಲಟಗಳನ್ನು ಕುರಿತು ನೋಡಬಲ್ಲ ಮುನ್ನೋಟವಿರುತ್ತದಂತೆ. ದಸ್ತೊವೆಸ್ಕಿ 'Notes From Under Ground' ಬರೆದಾಗ ಇಪ್ಪತ್ತನೆ ಶತಮಾನದಲ್ಲಿ ರೂಪುಗೊಳ್ಳುವ ಆಧುನಿಕ ಮನುಷ್ಯನ ವಿಚಾರವಾದ ಒಳಿತು–ಕೆಡಕುಗಳ ಸಂಘರ್ಷ, ಹಿಂಸೆಯ ಮೂಲಕ ನಮ್ಮ ಆದರ್ಶವನ್ನು ಸಾಧಿಸಿಕೊಳ್ಳಬಹುದೆ? ವೈಜ್ಞಾನಿಕ ಬೆಳವಣಿಗೆಯ ನಂತರ ನಮಗೆ ಸೂಕ್ತವಾಗಬಲ್ಲ ಧರ್ಮದ ಸ್ವರೂಪ ಯಾವುದು ಎಂಬ ಪ್ರಶ್ನೆಗಳನ್ನೆಲ್ಲ ಎದುರಿಸುತ್ತಾ ತನ್ನ ಪಾತ್ರಗಳನ್ನು ಕಡೆಯುತ್ತಾ ಹೋದ. ಈ ಪ್ರಮಾಣದಲ್ಲಲ್ಲ ದಿದ್ದರೂ ನಮ್ಮಲ್ಲಿ ಕುವೆಂಪು, ಕಾರಂತರು ತಮ್ಮ ಹೂವಯ್ಯ, ಗುತ್ತಿ, ರಾಮ, ಲಚ್ಚ – ಇಂತಹ ಪಾತ್ರಗಳ ಮೂಲಕ ಹೊಸಕಾಲದಲ್ಲಿ ನಿರ್ಮಾಣವಾಗುವ ವ್ಯಕ್ತಿಗಳ ರೂಪುರೇಷೆಯ ಮುಂಗಾಣ್ಕೆಯನ್ನು ನಮಗೆ ಕೊಟ್ಟರು. ತದನಂತರದ ಲೇಖಕರು, ಈ ಮೂಲ ಮಾದರಿಗಳನ್ನು ಇಟ್ಟುಕೊಂಡು ತಮ್ಮ ತಮ್ಮ ಕಾಲದ, ಅನುಭವದ ಹಿನ್ನೆಲೆಯಲ್ಲಿ ಈ ಮೂಲಮಾದರಿಗಳಿಗೆ ವಿಸ್ತರಣೆ ನೀಡುತ್ತಾ ಹೋದರು. ಇಂತಹ ಐತಿಹಾಸಿಕ ಕೆಲಸವನ್ನು ಸ್ತ್ರೀಪಾತ್ರಗಳಿಗೆ ಸಂಬಂಧಪಟ್ಟ ಹಾಗೆ ತ್ರಿವೇಣಿಯವರು ಮಾಡಿದರೆನಿಸುತ್ತದೆ. ಹೊಸ ವಿದ್ಯಾಭ್ಯಾಸ, ಉದ್ಯೋಗ, ಸ್ವಂತಿಕೆಯ ಹಂಬಲ ಇವೆಲ್ಲವೂ ಗಂಡಸು–ಹೆಂಗಸಿನ ವ್ಯಕ್ತಿತ್ವದ ಮೇಲೆ ಮಾಡುವ ಪರಿಣಾಮಗಳನ್ನು, ತಂದೊಡ್ಡುವ ಸಮಸ್ಯೆಗಳನ್ನು ಅವರು ಜನಪ್ರಿಯ ಕಾದಂಬರಿಯ ಚೌಕಟ್ಟಿನೊಳಗೆ ಮಂಡಿಸುತ್ತಾ ಹೋದರು. ಅನಂತರದ ಲೇಖಕಿಯರು ಈ ಮೂಲಮಾದರಿಯನ್ನು ವಿಸ್ತರಿಸುತ್ತಿದ್ದಾರೆ, ಮಾರ್ಪಡಿಸುತ್ತಿದ್ದಾರೆ. ಸ್ತ್ರೀಯರ ಕಥಾಲೋಕದಲ್ಲಿ ನಮಗೆ ಹೂವಯ್ಯ, ಲಚ್ಚ, ಗುತ್ತಿ, ರಾಮನಂಥವರು ಸಿಕ್ಕಿದ್ದಾರೆಯೇ? ನನಗೆ ಗೊತ್ತಿಲ್ಲ.

ಹೆಂಗಸರ ಕಥಾಲೋಕದ 'Hero' ಇನ್ನೂ ನಿರ್ಮಾಣವಾಗುತ್ತಿದೆ ಎಂದೇ ನನ್ನ ಭಾವನೆ. ಹೆಂಗಸಿನ ಹುಡುಕಾಟ ನಾನಾ ದಿಕ್ಕುಗಳಲ್ಲಿ ಹಂಚಿಹೋಗಿದೆ. ಲಾಗಾಯ್ತಿನಿಂದ ಬಂದ ಪಾಲನಾಪ್ರವೃತ್ತಿಯನ್ನು ಅವಳ ಸ್ವಭಾವ ನಿರಾಕರಿಸುವುದಿಲ್ಲ. ಹೊಸ ಕಾಲದ ಒತ್ತಡದಿಂದ ಮೂಡಿಬರುವ ವೃತ್ತಿಪರತೆ, ಸ್ವಂತಿಕೆಯ ಹಂಬಲವನ್ನು ಕೂಡ ಅವಳು ಕೈಬಿಡುವ ಹಾಗಿಲ್ಲ. ತನ್ನ ದೇಹದಲ್ಲಿರುವ ಕಾಮದ ಸ್ವಚ್ಛಂದತೆಯನ್ನು ಕೂಡ ಅವಳು ಗುರುತಿಸಬೇಕು. ಇವೆಲ್ಲವನ್ನೂ ಒಳಗೊಳ್ಳುವ ಹೆಂಗಸು ನಮ್ಮ ಸಮಾಜದಲ್ಲಿಯೇ ಇನ್ನೂ ನಿರ್ಮಾಣಗೊಂಡಿಲ್ಲವಾದ್ದರಿಂದ, ಸಾಹಿತ್ಯ ಕೃತಿಗಳಲ್ಲಿ, ಕಥನ ಸಾಹಿತ್ಯದಲ್ಲಿ ಸಿಕ್ಕಿಬಿಡಬೇಕು ಎಂದು ನಿರೀಕ್ಷಿಸುವುದು ಅಷ್ಟೊಂದು ಸೂಕ್ತವಲ್ಲವೇನೋ ?

ಸ್ವತಃ ಕತೆಗಾರನಾಗಿ, ಕಾದಂಬರಿಕಾರನಾಗಿ ಕೂಡ ನಾನು ಈ ಸಮಸ್ಯೆಯನ್ನು ಎದುರಿಸಿದ್ದೇನೆ. ಹೆಂಗಸರ ಪಾಲನಾಪ್ರವೃತ್ತಿಯನ್ನು ಸೂಚಿಸು ವಂತಹ ಹಳೆಯ ತಲೆಮಾರಿನ ಹೆಂಗಸು, ಅಜ್ಜಿಯರ ಪಾತ್ರವನ್ನು ಸೃಷ್ಟಿಸಿದಾಗ ಸಾಮಾನ್ಯವಾಗಿ ಎಲ್ಲರೂ ಅಂತಹ ಪಾತ್ರಗಳನ್ನು ಭಾವನಾತ್ಮಕವಾಗಿ ಒಪ್ಪುತ್ತಾರೆ. ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಹಾಕಿಕೊಂಡು ಆತ್ಮಾನುಕಂಪದಿಂದ ಪ್ರತಿಕ್ಷಣವೂ ಕೊರಗುವ ಪಾತ್ರಗಳನ್ನು ಸೃಷ್ಟಿಸಿದಾಗಲೂ ಓದುಗರು ಸಂತೋಷಪಡುತ್ತಾರೆ. 1992ರಲ್ಲಿ ನಾನು ಪ್ರಕಟಿಸಿದ 'ಗೌರಿ' ಕಾದಂಬರಿಯ ನಾಯಕಿ ಮನೆಗೆಲಸದವಳು. ಕಾದಂಬರಿಯಲ್ಲಿ ಅವಳು ಸಾಹಿತ್ಯಕೃತಿಯ ಪಾತ್ರವೊಂದರಂತೆ ಮೂಡಿಬರದೆ ನಿಜಜೀವನದ ವ್ಯಕ್ತಿಯೊಬ್ಬರ ತದ್ರೂಪಿನಂತೆ ಮೂಡಿಬಂದದ್ದರಿಂದ ಆಕೆಯ ತಿಳಿವಳಿಕೆ, ಚಟುವಟಿಕೆ, ಪ್ರತಿಭಟನೆ ಎಲ್ಲವೂ ಮೆಲುದನಿಯಲ್ಲಿ ನಡೆಯಿತು. ಅದೊಂದು ರೀತಿಯಲ್ಲಿ ಬಿಡುಗಡೆಯೇ ಇಲ್ಲದ ಸ್ಥಿತಿಯ ವರ್ಣನೆ. ಆದರೂ ಇದು ಓದುಗರಿಗೆ ಇಷ್ಟವಾಯಿತು. ಈಚಿನ 'ಕಾಲಜಿಂಕೆ' ಕಾದಂಬರಿಯಲ್ಲಿ ನಾನು ಸೃಷ್ಟಿಸಿದ ಪ್ರಾರ್ಥನಾ ಎನ್ನುವ ಹೊಸಕಾಲದ ತರುಣಿಯ ಪಾತ್ರ ಇದಕ್ಕಿಂತ ತೀರಾ ಭಿನ್ನವಾದ್ದು. ಈಕೆ ತರುಣಿ, ಸೂಕ್ಷ್ಮಜ್ಞೆ, ಆತ್ಮನಿರೀಕ್ಷೆಯಿರುವವಳು. ಪ್ರೀತಿಸಬಲ್ಲಳು, ಪ್ರತಿಭಟಿಸಬಲ್ಲಳು, ಹಿಂದಿನ ಪೀಳಿಗೆಯನ್ನು ವಿಮರ್ಶಿಸುತ್ತಲೂ ಸಹಾನುಭೂತಿ ತೋರಬಲ್ಲಳು. ತನ್ನ ವ್ಯಕ್ತಿತ್ವದ ಹುಡುಕಾಟದಲ್ಲಿ ಸ್ವತಃ ತಂದೆ ತಾಯಿಗಳನ್ನು ಅಲ್ಲದೆ, ಈ ಕಾಲದ ಎಲ್ಲ ಸಾಮಾಜಿಕ–ರಾಜಕೀಯ ಪ್ರಶ್ನೆಗಳನ್ನು ಕೂಡ ಒಳಗೊಳ್ಳಬಲ್ಲಳು. ಅವಳಲ್ಲಿ ಭಾವತೀವ್ರತೆಯಿದೆ, ಕನಸುಗಾರಿಕೆಯಿದೆ, ಒತ್ತಾಸೆಯಿದೆ. ಇದೆಲ್ಲದರ ಜೊತೆಗೆ ಅದೀಗ ತಾನೇ ತನ್ನ ದೇಹದಲ್ಲಿ ಅರಳುತ್ತಿರುವ ಯೌವ್ವನದ, ಚೈತನ್ಯದ ಅರಿವೂ ಇದೆ. ಈಕೆ, ಇವಳಂಥವಳು ನಮ್ಮ ಕಾಲದಲ್ಲಿ ನಿರ್ಮಾಣಗೊಳ್ಳಬಹುದಾದ, ನಿರ್ಮಾಣಗೊಳ್ಳಲೇಬೇಕಾದ ಹೆಂಗಸಿನ ಮೂಲ ಮಾದರಿಯಾಗಿರಬಹುದು. ಆದರೆ ಸ್ವಲ್ಪ ಸೂಕ್ಷ್ಮವಾಗಿ ನೋಡಿದರೆ ಗೊತ್ತಾಗುತ್ತದೆ, ಈಕೆ ಸಂಕೀರ್ಣಳಾಗಿ ಸಂವೇದನಾಶೀಲವಾಗಿ ಕಂಡರೂ ಮೂಲಭೂತವಾಗಿ

*(8ನೇ ಪುಟ ನೋಡಿ)*

# ಈಗ ಬೇಕಿರುವುದು 'ಮಾದರಿ'ಯಾಗಬಲ್ಲ ಹೆಣ್ಣಿನ ಚಿತ್ರಣವಲ್ಲ

• *ಡಾ. ಪಿ. ಚಂದ್ರಿಕಾ*

ನನ್ನ ಮಾತುಗಳನ್ನು ಶುರು ಮಾಡುವ ಮೊದಲು ಒಂದು ಸಂಗತಿಯನ್ನು ಹೇಳಲು ಇಚ್ಛಿಸುತ್ತೇನೆ.

ಬೇಂದ್ರೆಯವರು ಜಾನಕಮ್ಮನವರಿಗೆ ಬರೆದಿರುವ ಪತ್ರರೂಪೀ ಕವನ, 'ತಂಗಿ ಜಾನಕಿಗೆ' ಎನ್ನುವುದು. ಇದರಲ್ಲಿ ಒಬ್ಬ ಕಿರಿಯ ತಲೆಮಾರಿನ ಲೇಖಕಿಗೆ ಹಿರಿಯ ತಲೆಮಾರಿನ ಕವಿಯೊಬ್ಬ ಸಾಹಿತ್ಯದ ಬಗ್ಗೆ '**ಹೀಗಿರಬೇಕು**' ಎಂದು ಹೇಳಿರುವ ಅನೇಕ ಮಾತುಗಳಿವೆ. ಅದು ಈಗಾಗಲೇ ಸಾಹಿತ್ಯ ಎಂದರೆ ಏನೆಂದು ಅವರು ತಿಳಿದಿದ್ದರೋ ಅದನ್ನು ಹೇಳುವ ಪ್ರಯತ್ನವೇ ಆಗಿದೆ. ಬೇಂದ್ರೆ ಯಾಕೆ ಹೀಗೆ ಮಾಡಿದರು ಎನ್ನುವುದು ನನ್ನ ಮೊದಲ ಪ್ರಶ್ನೆ. ಅದೇ 'ತಮ್ಮ ರಾಮನಿಗೆ' ಎನ್ನುವ ಕವಿತೆಯನ್ನು ಯಾಕೆ ಬರೆಯಲಿಲ್ಲ ಎನ್ನುವುದು ನನ್ನ ಇನ್ನೊಂದು ಪ್ರಶ್ನೆ. ಹೀಗೆ ನಾನು ಪ್ರಶ್ನೆಗಳನ್ನು ಕೇಳುತ್ತಾ ಹೋದರೆ ಅದು ಉದ್ಧಟತನದ ಮಾತಾಗುತ್ತದಾ? ಗೊತ್ತಿಲ್ಲ. ಆದರೆ ಒಂದು ಕಾಲಕ್ಕೆ ಇಡೀ ಮಹಿಳಾ ಸಾಹಿತ್ಯವನ್ನು ನಿರ್ದೇಶಿಸಿದ್ದು ಪುರುಷಸಾಹಿತ್ಯದ ಮಾದರಿಗಳೇ ಎನ್ನುವುದರಲ್ಲಿ ಉತ್ಪ್ರೇಕ್ಷೆಯಿಲ್ಲ. ಇಷ್ಟರ ನಡುವೆಯೂ ಮಹಿಳಾ ಸಾಹಿತ್ಯದ ಬಗ್ಗೆ ಅಗತ್ಯಕ್ಕಿಂತ ಹೆಚ್ಚಾದ ಅನಾದರವೂ ಕಾಣಿಸಿಕೊಂಡಿದೆ. ಯಾಕೆ ಹೀಗೆ? ಪ್ರತಿ ಕಾಲದ ಗಂಡಿನ ಅಗತ್ಯಗಳಿಗೆ ಹೆಣ್ಣು ಬರೆಯುವ ಅನಿವಾರ್ಯತೆ ಯಾಕೆ ಸೃಷ್ಟಿಯಾಗುತ್ತಿದೆ? ಎನ್ನುವುದು ಕುತೂಹಲದ ಪ್ರಶ್ನೆಯೇ. ಸತ್ಯನಾರಾಯಣ ಅವರ ಲೇಖನವನ್ನು ಓದಿದಾಗ ನನಗೆ ಅನ್ನಿಸಿದ್ದು, ಪುರುಷ ನಿರೀಕ್ಷೆಯ ಕುರಿತಾದ ಈ ಅಂಶಗಳು. ಹೆಣ್ಣಿನ ಬರವಣಿಗೆಯ ಸ್ವರೂಪವನ್ನು ಕುರಿತಂತೆ ಅವಳು ತೆಗೆದುಕೊಳ್ಳಬೇಕಿರುವ ನಿರ್ಧಾರಗಳಿಗಿಂತ ಹೊರಗಿನ ಒತ್ತಡಗಳೇ ಮುಖ್ಯವಾದವೇ? ಬೇಂದ್ರೆಯವರ ನಿರೀಕ್ಷೆಯನ್ನು ದಾಟಿ ಜಾನಕಮ್ಮನವರ ಕವಿತೆಗಳಿದ್ದವೇ? ಹಾಗಾಗಿ ಬೇಂದ್ರೆ ಜಾನಕಮ್ಮನವರಿಗೆ ನಿರ್ದೇಶನವನ್ನು ನೀಡಿದರೆ? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಎಂದರೆ ಮಹಿಳಾ ಬರವಣಿಗೆಯ ಸ್ವರೂಪದ ಕುರಿತಾದ ಮೂಲಭೂತ ಪ್ರಶ್ನೆಯೂ ಹೌದು.



ಮಹಿಳೆ ಬರೆದದ್ದು ರೋಚಕ, ಅತಿರಂಜಕ ಸಾಹಿತ್ಯ ಎನ್ನುವುದು ಅನೇಕರ ಅಭಿಮತ. ಆದರೆ ನನಗೆ ತಿರುಮಲಾಂಬ ಇರಬಹುದು, ಕೊಡಗಿನ ಗೌರಮ್ಮ ಇರಬಹುದು ಅಥವಾ ವೈದೇಹಿ, ನೇಮಿಚಂದ್ರ, ಚಂಪಾವತಿ ಇರಬಹುದು. ಕನ್ನಡದ ಮಟ್ಟಿಗೆ ಹೇಳುವುದಾದರೆ ಇರುವ ಸಾಹಿತ್ಯಕ ಚೌಕಟ್ಟಿನ ಒಳಗೇ ಬೇರೆ ಬಗೆಯ ಮಾತುಗಳನ್ನು ಹೇಳಲು ಹೊರಟಿದ್ದಾರೆ–ಆದರೆ ಅದನ್ನು ಸರಿಯಾಗಿ ಗುರುತಿಸುವ ಪ್ರಯತ್ನ ಇನ್ನೂ ಆಗಿಲ್ಲ.

ಮಹಿಳೆ ಮತ್ತು ಮಾನಸಿಕಸ್ಥಿತಿಯ ಕುರಿತಂತೆ ಅನೇಕ ಅಧ್ಯಯನಗಳು ಆಗಿವೆ. ಹೆಣ್ಣಿಗೆ ಮಾದರಿಗಳು ಬೇಕಾಗುವುದಿಲ್ಲ. ಅನೇಕ ವೇಳೆ ಸಮಾಜ ಯಾವುದನ್ನು ಹೇಳುತ್ತಾ ಬಂದಿರುತ್ತದೆಯೋ ಬಹುಪಾಲು ಮಹಿಳೆಯರು ಅದನ್ನು ಒಪ್ಪಿಕೊಂಡಿರುತ್ತಾರೆ. ಅದನ್ನು ತಿರಸ್ಕರಿಸುವ ಮಹಿಳೆಗೆ ತನ್ನ ಮುಂದೆ ಎರಡು ಮಾದರಿಗಳಿರುತ್ತವೆ. ಒಂದು, ತನ್ನನ್ನು ತಾನು ಸಾಧ್ಯವಾದಷ್ಟುಮಟ್ಟಿಗೆ ಎಕ್ಸಿಬಿಟ್ ಮಾಡಿಕೊಳ್ಳುವುದು. ಮತ್ತೊಂದು ಬಗೆ, ಒಂದು ದಿವ್ಯ ಮೌನ.

ಸತ್ಯನಾರಾಯಣ ಅವರು ಎತ್ತಿರುವ ಪ್ರಶ್ನೆಗಳು ಕನ್ನಡದ ಮಹಿಳಾ ಸಾಹಿತ್ಯವನ್ನು ಕುರಿತಂತೆ ತೀರಾ ಗಂಭೀರವಾದದ್ದೇ ಮತ್ತು ಯಾಕೆ ಎನ್ನುವ ಪ್ರಶ್ನೆಯನ್ನು ಮತ್ತೆ ಮತ್ತೆ ಕೇಳಿಕೊಳ್ಳಬೇಕಾಗಿದೆ. ಈ ಕ್ಷಣಕ್ಕೆ ನನಗೆ ಅನ್ನಿಸುತ್ತಿರುವ ಕಾರಣಗಳು ಎರಡು. ಒಂದು, ಮಹಿಳೆ ತನ್ನ ಬರಹಗಳಲ್ಲಿ ತನಗೆ ಬೇಕಾದ ಮಾದರಿಗಳನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಲೇ ಇದ್ದಾಳೆ. ತಿರುಮಲಾಂಬ ಅವರ ವಿರಾಗಿಣಿ, ಎಂಕೆ ಇಂದಿರಾ ಅವರ ಫಣಿಯಮ್ಮ ಇರಬಹುದು; ತ್ರಿವೇಣಿ, ಕೊಡಗಿನ ಗೌರಮ್ಮ, ಎಚ್.ವಿ. ಸಾವಿತ್ರಮ್ಮ ಹೀಗೆ ಹೆಸರಿಸುತ್ತಾ ಹೋಗಬಹುದಾದ ನವೋದಯ, ನವೋದಯ ಪೂರ್ವ ಲೇಖಕಿಯರಲ್ಲಿ ತಮ್ಮದೇ ಇತಿಹಾಸವನ್ನು ಕಟ್ಟಿಕೊಳ್ಳುವ ಮಾರ್ಗಗಳು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಾ ಹೋಗುತ್ತವೆ. ಇದು ಮಹಿಳೆಯ ಜೀವನದಂತೆ ಢಾಳಾದ ಮತ್ತು ಸಮಾಜಕ್ಕೆ ಎದುರಾಗಿ ನಿಲ್ಲುವ ಅಥವಾ ಪ್ರತಿರೋಧದ ಅಲೆಗಳನ್ನು ಎಬ್ಬಿಸುವಂಥದ್ದಲ್ಲ. ಆದರೆ ಅದು ಕಟ್ಟಿಕೊಡುವ ಚರಿತ್ರೆಯ ಕೆಲ ಅಂಶಗಳು ಯಾಕೆ ಗಣನೆಗೆ ಬರಲಿಲ್ಲ? ತನ್ನ ಸಮಕಾಲೀನ ಬದುಕಿನ ಎಲ್ಲಾ ವಿವರಗಳಿಗೂ ನಾಯಕಿಯಾದ ಹೆಣ್ಣನ್ನು ಕನ್ನಡ ಸಾಹಿತ್ಯ ಪರಿಗಣಿಸಲಿಲ್ಲ. ಪುರುಷನ ಸಮಸ್ಯೆ ಜಾಗತಿಕವಾದ್ದು ಎಂದು ಭಾವಿಸಿದ ಹಾಗೆ ಮಹಿಳೆಯ ಸಮಸ್ಯೆಯನ್ನು ಭಾವಿಸಲಿಲ್ಲ. ಇದಕ್ಕೆ ಮುಖ್ಯವಾದ ಕಾರಣ ಸಂಸ್ಕೃತಿಯನ್ನು ಮುನ್ನಡೆಸುವ ಕೆಲಸದಲ್ಲಿ ಸ್ತ್ರೀಗೆ ಪ್ರತ್ಯೇಕ ಸ್ಥಾನ ಇದೆ ಎಂದು ಪುರುಷ ನಂಬಿರುವುದು. ಮತ್ತು ಆ ಚೌಕಟ್ಟಿನಲ್ಲೇ ಹೆಣ್ಣನ್ನು ಇಟ್ಟು ನೋಡುತ್ತಿರುವುದು. ಅನಂತರ ಬಂದ ನವ್ಯ ಸಾಹಿತ್ಯದ ಕಾಲದ ಮಹಿಳಾಸಾಹಿತ್ಯದಲ್ಲಿ ಮತ್ತೆ ಈ ಬಗೆಯ ಅನುಕರಣೆಯನ್ನೇ ಕಾಣುತ್ತೇವೆ. ಇದು ತಪ್ಪು-ಸರಿ ಎನ್ನುವುದಕ್ಕಿಂತ, ಚಾರಿತ್ರಿಕ ಒತ್ತಡಗಳು ರೂಪಿಸಿರುವ ಮಾದರಿಗಳಲ್ಲಿಯೇ ಹೆಣ್ಣು ತನಗೆ ಬೇಕಾದ ತನ್ನತನವನ್ನು ತುಂಬುವ ಪ್ರಯತ್ನವನ್ನು ಮಾಡುತ್ತಲೇ ಹೋಗುತ್ತಾಳೆ.

ಮಹಿಳೆಯ ಜಗತ್ತು ಭಾವನಾತ್ಮಕವಾದ್ದು, ವೈಚಾರಿಕತೆ ಅನಂತರದ್ದು. ಭಾವನಾತ್ಮಕವಾಗಿ ಅವಳ ನಿಲುವುಗಳನ್ನು ಪುರುಷ ಪ್ರಶ್ನಿಸುತ್ತಲೇ ಬಂದಿದ್ದಾನೆ. ಶತಮಾನಗಳ ಈ ನಿಲುವಿಗೆ ಮಹಿಳೆ ಉತ್ತರ ಹೇಳಲೇಬೇಕಿದೆ. ಇವತ್ತು ಬದಲಾದ ತಂತ್ರಜ್ಞಾನಗಳು ಮಹಿಳೆಯ ಬದುಕನ್ನು ಬದಲಾಯಿಸಿವೆ. ಅದಕ್ಕೆ ತಕ್ಕುದಾದ ಸಂವೇದನೆಗೆ ತನ್ನ ಭಾಷೆಯನ್ನು ಒಗ್ಗಿಸಿಕೊಳ್ಳುವ ಯತ್ನವನ್ನು ಅವಳು ಮಾಡುತ್ತಲೇ ಇದ್ದಾಳೆ. **ಅವಳಿಗೆ ಈಗ ಬೇಕಿರುವುದು ಮಾದರಿಯಾಗಬಲ್ಲಹೆಣ್ಣಿನ ಚಿತ್ರವಲ್ಲ, ಯಾವತ್ತೂ ಅವಳಿಗೆ ಅದು ಬೇಕಾಗೂ ಇಲ್ಲ.**

'ಮಾಡಿದ್ದುಣ್ಣೋ ಮಹರಾಯ'ದಿಂದ ಪುರುಷ ನಿರ್ಮಿತವಾದ ಮಾದರಿಯನ್ನು ಅವಳು ಒಡೆಯುವುದು ಬೇಕು. ಅದಕ್ಕಾಗಿಯೇ ತಾನು, ತನ್ನ ಒಳಗು ಮತ್ತು ತನ್ನ ಸುತ್ತಲಿನ ಜಗತ್ತಿನಲ್ಲಿ ಸಂಭವಿಸಬಹುದಾದ ಸಂಗತಿಗಳನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಅವಳಿಗೆ ಉದಾತ್ತತೆ ಬೇಡ, ರಂಜಕತೆ ಬೇಡ. ತನ್ನ ಸುತ್ತಲಿರುವ ಬೇಲಿಗಳನ್ನು ತಾನೇ ಒಡೆಯಬಹುದಾದ ತಂತ್ರಗಾರಿಕೆಯ ಕಡೆಗೆ ಆಲೋಚಿಸುತ್ತಲೇ ಬಂದಿದ್ದಾಳೆ. ಹೀಗಾಗಿ ಅಲ್ಲಿ ಹೂವಯ್ಯನಾಗಲೀ, ಗುತ್ತಿ, ಲಚ್ಚ, ರಾಮನಾಗಲೀ ಹುಟ್ಟಿಕೊಂಡಿಲ್ಲ. ಹಾಗೆಂದು ಇಲ್ಲಿ ಆದರ್ಶವಿಲ್ಲ ಎಂದು ಹೇಳುವಂತಿಲ್ಲ. ಆದರ್ಶ ಎನ್ನುವುದು ನಮ್ಮ ಬದುಕಿನ ಭಾಗದಲ್ಲೇ ಆವಿರ್ಭವಿಸಿದ್ದಾಗಿದ್ದು, ಅದಕ್ಕೆ ಸಿಕ್ಕ ರೂಪಕೂಡಾ ಅಪರೂಪದ್ದೇ. ಬಹುಶಃ ಇದನ್ನ ಪುರುಷ ಬರಹಗಾರನೊಬ್ಬ ನಿರೀಕ್ಷಿಸಿರಲಾರ.

ನನ್ನ ಮಾತುಗಳನ್ನು ಮತ್ತಷ್ಟು ಸ್ಪಷ್ಟಪಡಿಸುವುದಾದರೆ 'ಬರೆಹ' ಎನ್ನುವುದು ಅವಳಿಗೆ ಅಧಿಕೃತತೆಯನ್ನು ಹೇಳುವ ಮಾಧ್ಯಮವೇ ಅಲ್ಲ. ಹೀಗಾಗಿ ಬರೆಹ

*(8ನೇ ಪುಟ ನೋಡಿ)*

## ಹೊಸಕಾಲದ ಬರಹಗಾರ್ತಿಯರಿಂದ 'ಮಾದರಿ'ಗಳು ಬಂದಿಲ್ಲ....

(6ನೇ ಪುಟದಿಂದ)

ಇಂತಹ ಪಾತ್ರ ಕಲ್ಪನೆಯೇ ರೊಮ್ಯಾಂಟಿಕ್ ಆದದ್ದು, ಆದರ್ಶೀಕರಣಗೊಂಡದ್ದು! ಏಕೆಂದರೆ ನಮ್ಮ ಕಾಲದಲ್ಲೇ, ನಮ್ಮೆದುರಿಗೇ ಮೇಧಾಪಾಟ್ಕರ್, ಕಿರಣ್ ಮಜುಂದಾರ್, ಸುಧಾಮೂರ್ತಿ ಇವರೆಲ್ಲ ಇರುವಂತೆ ಜಯಲಲಿತ, ರಾಬ್ಡಿದೇವಿ, ಮೋನಿಕಾಬೇಡಿ, ಕಿರಣ್ ಬೇಡಿ, ಸಾಲುಮರದ ತಿಮ್ಮಕ್ಕ, ಪ್ರತಿಭಾ ತಾಯಿ ಪಾಟೀಲ್ ಕೂಡ ಇದ್ದಾರೆ. ನಿಜ, ಇವರೆಲ್ಲರೂ ಒಂದೇ ಪಾತ್ರದಲ್ಲಿ, ಒಂದೇ ವ್ಯಕ್ತಿತ್ವದಲ್ಲಿ ಎರಕಗೊಳ್ಳಲಾರರು. ಆದರೆ ಒಂದು ಮಹತ್ವದ ಕೃತಿಯಲ್ಲಿ ಇವರೆಲ್ಲರೂ ಬೇರೆ ಬೇರೆ ದೃಷ್ಟಿಕೋನಗಳಾಗಿ, ಸಾಧ್ಯತೆಗಳಾಗಿ ಬಂದು ಒಬ್ಬರನ್ನೊಬ್ಬರು ಪರೀಕ್ಷಿಸುತ್ತಾ, ಪ್ರಚೋದಿಸುತ್ತಾ ಹೊಸಮೂರ್ತಿಯ, ಹೊಸ ಮೂಲಮಾದರಿಯ ಸೃಷ್ಟಿಗೆ ಕಾರಣರಾಗಬಹುದು. ಗಂಡಸಿನ ಪಾತ್ರ ಸೃಷ್ಟಿ ಕೂಡ ನಮ್ಮ ಕಥನಸಾಹಿತ್ಯದಲ್ಲಿ ಇನ್ನೂ ಆಗಬೇಕಾಗಿದೆ. ಇದೆಲ್ಲ ಕೇವಲ ಪಾತ್ರಸೃಷ್ಟಿಯ ಹಂಬಲದಿಂದ ಆಗುವಂಥದ್ದಲ್ಲ. ನಮ್ಮೆದುರಿಗಿನ, ನಮ್ಮ ಕಾಲದ ಪಲ್ಲಟಗಳ ನಾಡಿಮಿಡಿತ ಬಲ್ಲವರು ಮಾತ್ರ ಇಂತಹ ಸೃಷ್ಟಿಗೆ ಕೈ ಹಾಕಬಲ್ಲರು.

ಇವರೆಲ್ಲ ಇಡಿಯಾಗಿಯೇ, ಅಂಶಿಕವಾಗಿಯೇ, ನಮ್ಮ ಕುಟುಂಬದ ಸದಸ್ಯರಾಗೇ ಎದುರಾಗಿಬಿಟ್ಟರೆ, ನಮಗೆ ಎದುರಿಸುವ ಚೈತನ್ಯವಿರುವುದೇ ಇಲ್ಲ. ಇಂತಹದೊಂದು ಸನ್ನಿವೇಶ ಎದುರಾಗದಷ್ಟು ಜಾಣತನದಿಂದ ನಾವು ವರ್ತಿಸುತ್ತೇವೆ. ಅಂತಹ ಸಾಧ್ಯತೆಗಳನ್ನು ಚಿವುಟಿ ಹಾಕುತ್ತೇವೆ. ನಮ್ಮ ಹೆಣ್ಣುಮಕ್ಕಳಿಗೆ ನೀಡುವಷ್ಟು ಸ್ವಾತಂತ್ರ್ಯವನ್ನು, ನಾವು ನಮ್ಮ ಹೆಂಡತಿಯರಿಗೆ ನೀಡುವುದಿಲ್ಲ. ಮಗಳ ಬದಲಾವಣೆಗಳು ಸೂಕ್ಷ್ಮವಾಗಿ ಅರ್ಥವಾಗುವಷ್ಟು ಸೊಸೆಯ ಆಕಾಂಕ್ಷೆಗಳು ಅರ್ಥವಾಗುವುದಿಲ್ಲ.

ಈಚೆಗೆ ನನ್ನ ಗೆಳತಿಯೊಬ್ಬರು ನಡೆಸುತ್ತಿದ್ದ ಸ್ತ್ರೀವಾದಿ ಮಾಸಪತ್ರಿಕೆಯೊಂದು ನಿಂತು ಹೋಯಿತು. ಆಕೆಯೇನು ಧೀರೋದಾತ್ತಳಲ್ಲ, ತ್ಯಾಗಮಯಿಯೂ ಅಲ್ಲ. ಮಧ್ಯಮವರ್ಗದ ಜೀವನದ ಎಲ್ಲ ಹಳವಂಡಗಳೂ ಅವಳ ಬದುಕಿನಲ್ಲಿದ್ದವು. ಮನೆಕೆಲಸ, ಆಫೀಸಿನ ಕೆಲಸ, ಸಂಘಟನೆಯ ಕೆಲಸ, ಪತ್ರಿಕೆಯ ಜವಾಬ್ದಾರಿ ಎಲ್ಲವೂ. ಇಪ್ಪತ್ತೈದು ವರ್ಷಗಳ ಹಿಂದೆ ಆಕೆಯ ಪತ್ರಿಕೆ ಪ್ರಾರಂಭವಾದಾಗ, ಮನೆಯಲ್ಲಿ ಒಂದು ವರ್ಷದ ಮಗು ಕಾಯುತ್ತಿದ್ದರೂ ಈಕೆ ಆಫೀಸು ಕೆಲಸ ಮುಗಿಸಿ, ಹಾದಿಯಲ್ಲಿ ಪತ್ರಿಕೆ ಅಚ್ಚಾಗುತ್ತಿದ್ದ ಮುದ್ರಣಾಲಯಕ್ಕೆ ಹೋಗಿ ನಂತರ ಮನೆಗೆ ಹೋಗುತ್ತಿದ್ದಳು. ಇದನ್ನೆಲ್ಲ ನೆನೆಯುತ್ತಾ ನಾನು ಆಕೆಯನ್ನು ಹೊಗಳಿದಾಗ ಅವಳು ಕೇಳಿದ್ದು ಒಂದೇ ಪ್ರಶ್ನೆ,

"ನಾನು ನಿಮ್ಮ ಕುಟುಂಬದ ಸದಸ್ಯೆಯಾಗಿದ್ದರೂ ನೀವು ಹೀಗೇ ಹೊಗಳುತ್ತಿದ್ದಿರಾ, ನನ್ನನ್ನು ಇದೇ ರೀತಿ ಬೆಳೆಯಲು ಬಿಡುತ್ತಿದ್ದಿರಾ?"

ಇಂತಹ ಪ್ರಶ್ನೆಗೆ ನಮ್ಮ ಅಂತರಂಗದಲ್ಲಿ ಕೊಟ್ಟುಕೊಳ್ಳುವ ಉತ್ತರಕ್ಕೆ ಮಾತ್ರ ಹೊಸಕಾಲದ ಹೊಸಹೆಂಗಸಿನ ಸ್ವರೂಪ ಮತ್ತು ಆಕೆ ಸಾಹಿತ್ಯ ಕೃತಿಯಲ್ಲಿ ಮತ್ತು ನಿಜ ಜೀವನದಲ್ಲಿ ನಿರ್ಮಾಣಗೊಳ್ಳುವಾಗ ಇರುವ ಕಷ್ಟಗಳು ಅರ್ಥವಾಗಬಲ್ಲದು. ❑

## ಈಗ ಬೇಕಿರುವುದು 'ಮಾದರಿ'ಯಾಗಬಲ್ಲ ಹೆಣ್ಣಿನ ಚಿತ್ರಣವಲ್ಲ....

(7ನೇ ಪುಟದಿಂದ)

ಎನ್ನುವುದನ್ನು ಆಕೆ ನೋಡುವುದು ಒಂದು ದಾಖಲಾತಿ ಎಂದಾಗಲೀ ತನ್ನ ಅಹಂಕೃತಿಯನ್ನು ತಣಿಸಿಕೊಳ್ಳುವ ಸಾಧನವಾಗಿಯಾಗಲೀ ಅಲ್ಲ. ಹೆಣ್ಣು ಮತ್ತು ಬರೆಹ ಎನ್ನುವುದು ಯಾವ ನೆಲೆಯಲ್ಲಿ ಪುರುಷನಿಗೆ ಅರ್ಥವಾಗುತ್ತದೆ ಮತ್ತು ಅದನ್ನು ಯಾವ ರೀತಿಯಲ್ಲಿ ತೆಗೆದುಕೊಳ್ಳುತ್ತಾನೆ ಎನ್ನುವುದನ್ನು ಮತ್ತೆ ಕೇಳಿಕೊಳ್ಳಬೇಕಿದೆ. ಅವನ ನಿರೀಕ್ಷೆಯ ಒಳಗೆ ಬರುವುದಿಲ್ಲ ಎನ್ನುವುದಕ್ಕೆ ಅದರ ಬಗ್ಗೆ ಅನಾದರವನ್ನು ತೋರುತ್ತಾ ಬಂದಿರುವುದನ್ನು ಕಾಣುತ್ತೇವೆ. ಆದರೆ ನಿರೀಕ್ಷೆ ಎನ್ನುವುದು ಎಷ್ಟೋವೇಳೆ ಇರುವ ಸ್ಥಿತಿಯನ್ನು ಮರೆಸುತ್ತದೆ. ಹಾಗಾಗುವುದರಿಂದ ನಿರೀಕ್ಷೆಯೇ ಮುಖ್ಯವಾಗಿ, ಅಲ್ಲೇನು ನಡೆದಿದೆ ಎನ್ನುವುದು ಮರೆಯಾಗಿ ಹೋಗುತ್ತದೆ.

ಕಿರಣ್‌ಬೇಡಿ, ಸುಧಾಮೂರ್ತಿ, ಕಿರಣ್‌ಮಜುಂದಾರ್ ಮುಂತಾದವರು ಯಾಕೆ ಇವತ್ತು ಎದ್ದು ಕಾಣುತ್ತಿದ್ದಾರೆ ಎಂಬುದೂ ಪ್ರಶ್ನೆಯೇ. ಸಾಮಾನ್ಯವಾಗಿ ಬದುಕಿದ ಒಬ್ಬ ಹೆಣ್ಣಿಗಿಂತ ಇವರು ಯಾಕೆ ಬೇರೆ ಎನ್ನಿಸುತ್ತಾರೆ? ಪುರುಷ ಯಾವುದನ್ನು ಆದರ್ಶ ಎಂದು ಭಾವಿಸಿದ್ದಾನೋ ಅದನ್ನು ಎತ್ತಿ ಹಿಡಿಯುವ ಕಾರಣಕ್ಕಾಗಿ ಅವರನ್ನು ಮುಖ್ಯವಾಗಿಸಲಾಗುತ್ತಿದೆಯೇ? ಇದರಲ್ಲಿ ಹೆಣ್ಣ ಸಾಧನೆ ಇಲ್ಲ ಅಂತಲ್ಲ. ಇಂಥಾ ಪಾತ್ರಗಳು ಬರುತ್ತಿಲ್ಲ ಬರಲಿ ಎನ್ನುವುದೂ ಸರಿಯೇ. ಹಾಗೆ ನೋಡಿದರೆ ಅಂಥ ಪುರುಷ ಪಾತ್ರಗಳು ಎಷ್ಟರಮಟ್ಟಿಗೆ ಬರುತ್ತಿವೆ ಎನ್ನುವುದೂ ಪ್ರಶ್ನೆಯೇ. ಅಲ್ಲಿ ಒಂದು ನೆನಪು ಇರುವಂತೆ ಇಲ್ಲೂ ಇದೆ. **ಅಲ್ಲಿ ಕಾಣುವ ಇತಿಹಾಸ ಇರುವಂತೆ ಇಲ್ಲಿ ಕಾಣದ ಇತಿಹಾಸವಿದೆ.** ಒಬ್ಬ ಬರಹಗಾರನಿಗೆ ಆಯ್ಕೆಗಳಿರುವಂತೆ ಮಹಿಳೆಗೂ ಆಯ್ಕೆಗಳಿವೆ. 'ಹೀರೋ' ಎಂದರೆ ಹೆಚ್ಚು ಶಕ್ತಿಶಾಲಿ ಮತ್ತು ಹೆಚ್ಚು ಜನರನ್ನು ತಲುಪಲು ಸಾಧ್ಯವಾಗುವ ಹಾಗೂ ಸಾರ್ವಕಾಲಿಕ ಸತ್ಯ ಎಂದು ಭಾವಿಸಿದ ಮೌಲ್ಯಗಳನ್ನು ಸಾರುವಂಥಾ ವ್ಯಕ್ತಿಗಳನ್ನು ಮಾದರಿಯನ್ನಾಗಿಸಲಾಗಿದೆ. ಇದ್ಯಾವುದೂ ಹೆಣ್ಣಿನ ವ್ಯಕ್ತಿತ್ವಕ್ಕೆ ಹತ್ತಿರವಾಗದೇ ಉಳಿಯುವ ಕಾರಣಕ್ಕಾಗಿ ಇಂಥಾ ಪಾತ್ರಗಳನ್ನು ಅವಳು ಸೃಷ್ಟಿಸುವ ಅಗತ್ಯವಿಲ್ಲ.

ಹೆಣ್ಣಿನ ವ್ಯಕ್ತಿತ್ವವೇ ಈ ಬಗೆಯ ಏಕಸೂತ್ರಗಳನ್ನು ಧಿಕ್ಕರಿಸುವುದರಿಂದ ಅವಳಿಗೆ ಈ ಬಗೆಯ ಹೀರೋಗಳ ಸೃಷ್ಟಿಯ ಕಡೆಗೆ ಗಮನವಿಲ್ಲ. ನನ್ನ ಮಟ್ಟಿಗೆ ಹೆಣ್ಣಿನ ಚರಿತ್ರೆಯನ್ನು ಸಾಹಿತ್ಯದ ಮೂಲಕ ಪುನರ್‌ರೂಪಿಸಲು ಯತ್ನಿಸುತ್ತಿರುವ ಚಂಪಾವತಿ, ಸ. ಉಷಾ, ನಾಗವೇಣಿ, ನೇಮಿಚಂದ್ರ, ಸುನಂದಾ, ಬಾನುಮುಷ್ತಾಕ್, ಸಾರಾ ಅಬೂಬಕರ್, ಪ್ರತಿಭಾ ನಂದಕುಮಾರ್, ಬಿ.ಟಿ. ಜಾಹ್ನವಿ, ಎಮ್.ಆರ್. ಕಮಲಾ, ಎಚ್.ಎಲ್. ಪುಷ್ಪಾ, ಎಂ.ಎಸ್. ವೇದಾ ಹೀಗೆ ಇತ್ತೀಚೆಗೆ ಬರೆಯುತ್ತಿರುವ ಅನೇಕರು ಇಂಥಾ ಪ್ರಯತ್ನಗಳಲ್ಲಿ ತೊಡಗಿಕೊಂಡಿದ್ದಾರೆ.

ಸತ್ಯನಾರಾಯಣ ಅವರು ಮಾಡುತ್ತಿರುವ ಆರೋಪಕ್ಕೆ ಐತಿಹಾಸಿಕ ಕಾರಣಗಳಿವೆ. ಆ ಕಾರಣಗಳನ್ನು ಕಾಣದಿದ್ದರೆ ಇಂಥಾ ಪ್ರಶ್ನೆಗಳಿಗೆ ಉತ್ತರ ಸಿಕ್ಕುವುದಿಲ್ಲ. ಈ ಪ್ರಶ್ನೆಗಳು ಎಷ್ಟರಮಟ್ಟಿಗೆ ಪ್ರಸ್ತುತ ಎಂದೂ ಅರ್ಥವಾಗುವುದಿಲ್ಲ. ಹೀಗಾಗಿ ಕನ್ನಡ ಗದ್ಯ ಬರೆಹಕ್ಕೆ ಸಂಬಂಧಿಸಿದಂತೆ ಅವರು ಮಾಡುತ್ತಿರುವ ಆರೋಪಗಳು ಬಹುಶಃ ಪದ್ಯ ಸಾಹಿತ್ಯಕ್ಕೆ ಅನ್ವಯಿಸುವುದಿಲ್ಲ. ಪದ್ಯ ಪ್ರಕಾರದಲ್ಲಿ ಒಪ್ಪುವವರಿಗೆ ಗದ್ಯಪ್ರಕಾರದಲ್ಲಿ ಒಪ್ಪಲು ಆಗದ ಸ್ಥಿತಿ ಯಾಕೆ ನಿರ್ಮಾಣ ಆಗುತ್ತದೆ ಎನ್ನುವುದೂ ಸಮಸ್ಯೆಯೇ. ಹೆಣ್ಣಿನ ಸಮಸ್ಯೆಯನ್ನು ಗ್ಲೋಬಲೈಸೇಷನ್ ಒಳಗೆ ಇರಿಸಲು ಸಾಧ್ಯವಾಗದು ಎನ್ನುವ ಮನಃಸ್ಥಿತಿ ಮೊದಲಿಂದಲೂ ಇದೆ. ಹೆಣ್ಣಿನ ಸಮಸ್ಯೆಯನ್ನು ಸ್ಥಳೀಯ ಎಂತಲೂ, ಗಂಡಿನ ಸಮಸ್ಯೆಯನ್ನು ವಿಶ್ವಾತ್ಮಕ ಎಂತಲೂ ನೋಡುವುದರ ಪರಿಣಾಮದಲ್ಲಿ ಈ ಬಗೆಯ ಪ್ರಶ್ನೆಗಳ ಮೂಲ ಇದೆ ಎನ್ನಿಸುತ್ತದೆ.

ಒಂದು ಪುಟ್ಟಕಥೆಯ ಮೂಲಕ ನನ್ನ ಮಾತುಗಳನ್ನು ಮುಗಿಸಬಹುದು. ಹೆಂಡತಿಗೆ ಉದಾರಿ ಗಂಡ ಹೇಳುತ್ತಾನೆ: 'ನಿನಗೆ ಸ್ವಾತಂತ್ರ್ಯವನ್ನು ಕೊಟ್ಟಿದ್ದೇನೆ. ನೀನು ಏನೂ ಮಾಡಲು ಶಕ್ತಳಿದ್ದೀಯೆ'. ಹೆಂಡತಿಗೆ ತುಂಬಾ ನೋವೆನ್ನಿಸಿತು. ಅವಳು ಅವನಿಗೆ ಹೇಳಿದಳು: 'ಅದೇನೊ ಕೊಟ್ಟೆ ಎಂದೆಯಲ್ಲಾ ಹಾಗೆ ಕೊಡಲು ಸ್ವಾತಂತ್ರ್ಯವೇನು ಕಡಲೇ ಬೀಜವೇ?'. ನಮ್ಮ ಪುರುಷರ ಉದಾರತಾವಾದ ಇಂಥದ್ದೇ ಅಲ್ಲವೇ ? ಅವರ ಮನೆಯ ಹೆಣ್ಣುಮಕ್ಕಳೂ ತಾವು ಅಂದುಕೊಂಡಿದ್ದನ್ನು ದಾಟಿಹೋದರೆ ಅದನ್ನು ಅವರು ಪ್ರತಿಭಟಿಸಿಯೇ ತೀರುತ್ತಾರೆ. ಇಂಥಾ ಪ್ರತಿರೋಧದ ನಡುವೆ ಹೆಣ್ಣು ಕಟ್ಟಿಕೊಡುತ್ತಿರುವ ಸಾಹಿತ್ಯ ಅದು ಒಳಗಿನಿಂದಲೇ ಒಂದು ಅಲೆಯನ್ನು ತಿಳಿಯದೇ ಹುಟ್ಟುಹಾಕುವಂಥದು. ❑

# ಶೀಲಾಗೌಡ ಅವರ ಸ್ಥಾಪನಾ ಕಲೆ

• ಪ್ರೊ॥ ಎಂ.ಎಚ್. ಕೃಷ್ಣಯ್ಯ

ತಡಿಕೆ, ಗರಿಗಳ ಶಾಲೆಗೆ ಬೆಂಕಿ ಹೊತ್ತಿಕೊಂಡು ನೂರಾರು ಮಕ್ಕಳು ಸುಟ್ಟು ಕರಿಕಲಾದ ದುರಂತ ಘಟನೆ ನೆನಪಿರಬಹುದು. ಪತ್ರಿಕೆಯಲ್ಲಿ ಆ ಸುದ್ದಿ ಮತ್ತು ಹೃದಯ ವಿದ್ರಾವಕ ದೃಶ್ಯದ ಛಾಯಾಚಿತ್ರಗಳು ಪ್ರಕಟವಾಗಿದ್ದುವು. ಅದು ನಮ್ಮ ಸುತ್ತಲ ನಗ್ನವಾಸ್ತವದ ಒಂದು ಘಟನೆ ಮಾತ್ರ. ಸೂಕ್ಷ್ಮಸಂವೇದನಾಶೀಲ ಕಲಾವಿದೆಯ ಮನಸ್ಸು ಅಂತಹ ದುರಂತಗಳಿಗೆ, ನೋವು, ಸಂಕಟಗಳಿಗೆ ಸ್ಪಂದಿಸುವ ಬಗೆ ವಿಶಿಷ್ಟ. ಆ ಘಟನೆಯನ್ನು ಬದುಕಿದಂತೆ, ಆ ಕ್ಷಣವನ್ನು ಎಲ್ಲ ಸಂಕೀರ್ಣ ಭಾವನೆ ಅನುಭೂತಿಗಳೊಂದಿಗೆ ಮೂರ್ತೀಕರಿಸುವ ಕಲಾತ್ಮಕ ವಿಧಾನವೂ ವಿಶಿಷ್ಟ. ಒಂದು ಚಿತ್ರ ರಚಿಸಿ ಪ್ರದರ್ಶಿಸುತ್ತಿದ್ದ ಕಾಲದಿಂದ ಕಲಾವಿದರು ಬಹುದೂರ ಸಾಗಿ ಬಂದಿದ್ದಾರೆ. ದಿನನಿತ್ಯದ ಸುತ್ತಮುತ್ತ ದೊರೆಯುವ ವಸ್ತು ಸಾಮಗ್ರಿಗಳಿಂದಲೇ, ಅದನ್ನೇ ಕಲಾಮಾಧ್ಯಮವನ್ನಾಗಿಸಿ, ಅನುಭವವನ್ನು ಕಟ್ಟಿಕೊಡುವ ಬಗೆಯೇ ವಿಶಿಷ್ಟ. ಕಲಾವಿದೆ ಶೀಲಾಗೌಡ ಆ ದುರಂತಕ್ಕೆ ಸ್ಪಂದಿಸಿ ರಚಿಸಿದ ಕಲಾಕೃತಿ ಸ್ಥಾಪನಾ ಕಲೆಯ ಮಾದರಿ. ಊಟದ ಮೇಜಿನ ಮೇಲೆ ದಾರ, ಬ್ಯಾಂಡೇಜಿನ ಜಾಲರಿಬಟ್ಟೆಗಳಿಗೆ ಇದ್ದಿಲ ಪುಡಿಯನ್ನು ಅಂಟು ಬಳಸಿ ಕಟ್ಟಿಗೆಗಳಂತೆ ಮಾಡಿ ಕಪ್ಪು, ಕೆಂಪು ಬಣ್ಣ ಬಳಸಿ ಇಟ್ಟಿದ್ದ ಬಗೆ, ಸುಟ್ಟು ಕರಕಲಾದ ಕಟ್ಟಿಗೆ ತುಂಡುಗಳು, ಆದರೆ ರಕ್ತವೂ ಇದೆ. ಸುಟ್ಟ ಮಾಂಸಲ ಮುದ್ದೆಯಂತೆ ಸುತ್ತಿದ ಬಟ್ಟೆ, ಕೆಂಪುದಾರಗಳೂ ಇವೆ. ಇಂತಹ ಒಂದು ರಚನೆ ಯಾವುದೇ ಒಂದು ನಿರ್ದಿಷ್ಟ ಘಟನೆಯ ಸೂಚನೆ ಮಾತ್ರವೇ ಆಗಿ ಉಳಿಯುವುದಿಲ್ಲ. ಬಡತನ, ಬಡಮಕ್ಕಳ ಶಿಕ್ಷಣ, ಅವರನ್ನು ಶಾಲೆಗೆ ಬಂದು ವಿದ್ಯೆ ಕಲಿಯಲು ಸೆಳೆಯುವ ಮಧ್ಯಾಹ್ನದ ಊಟ, ಅದನ್ನು ಸಿದ್ಧಪಡಿಸುವ ತಾತ್ಕಾಲಿಕ ಅಡಿಗೆ ಮನೆ, ಹಲವು ಹಂತಗಳಲ್ಲಿನ ವ್ಯವಸ್ಥೆಯಲ್ಲಿನ ನಿರ್ಲಕ್ಷ್ಯ, ಒಂದು ಕಿಡಿ ಭಗ್ಗನೆ ಬೆಂಕಿ ಹೊತ್ತಿಸಿ ನೂರಾರು ಎಳೆಯ ಜೀವಗಳು, ಕೋಮಲ ಎಳೆಯ ದೇಹಗಳು ಗುರುತಿಸಲೂ ಸಾಧ್ಯವಾಗದ ಸುಟ್ಟ ಕರಕಲು ಮುದ್ದೆಯಾಗಿರುವುದು ಒಂದು ದೃಶ್ಯರೂಪಕವೇ ಆಗುತ್ತದೆ.

ಶೀಲಾಗೌಡ ಅವರು ಅಂತಹ ದೃಶ್ಯ ರೂಪಕಗಳನ್ನು ಸೃಷ್ಟಿಸುವ ಅಪೂರ್ವ ಕಲಾವಿದೆ. ಕಲಾಸೌಂದರ್ಯದ ವೈಭವೀಕರಣವನ್ನು ಮುರಿದು ಅನುಭವ, ಅರ್ಥಸ್ತರಗಳ ಕಡೆ, ಬಳಸುವ ಸಾಮಗ್ರಿಯೂ ಕಲಾಕೃತಿಯ ಅರ್ಥಸ್ಫುರಣೆಯ ಭಾಗವೇ ಆಗುವಂತೆ ಒತ್ತು ನೀಡುವ ಕಲಾವಿದೆ. ಬೆಂಗಳೂರಿನ ಕೆನ್ ಕಲಾಶಾಲೆಯಲ್ಲಿ ಆರ್.ಎಂ. ಹಡಪದರ ಶಿಷ್ಯೆಯಾಗಿ, ಬರೋಡದ ಎಂ.ಎಸ್. ವಿಶ್ವವಿದ್ಯಾಲಯದಲ್ಲಿ ಕೆ.ಜಿ. ಸುಬ್ರಹ್ಮಣ್ಯನ್ ಅವರಲ್ಲಿ ಕಲಿತುದು ಮಾತ್ರವಲ್ಲ, ಶಾಂತಿನಿಕೇತನದಲ್ಲಿ ಚಿತ್ರಕಲೆಯಲ್ಲಿ ಪೋಸ್ಟ್ ಡಿಪ್ಲೋಮಾ ಮಾಡಿದವರು. ಸಮಾಜಶಾಸ್ತ್ರ, ತತ್ತ್ವಶಾಸ್ತ್ರಗಳಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಬ್ಯಾಚಲರ್ಸ್ ಪದವಿ ಪಡೆದವರು. ಮುಂದೆ ಬಹು ಅಪರೂಪದ ಇನ್‌ಲ್ಯಾಕ್ ಶಿಷ್ಯವೇತನ ಗಳಿಸಿ ಲಂಡನ್ನಿನ ರಾಯಲ್ ಕಲಾಕಾಲೇಜಿನಲ್ಲಿ ಸ್ನಾತಕೋತ್ತರ ಪದವಿಯನ್ನು ಚಿತ್ರಕಲೆಯಲ್ಲಿ ಗಳಿಸಿದವರು. ಪ್ಯಾರಿಸ್ಸಿನಲ್ಲೂ ರೆಸಿಡೆನ್ಸಿ ಪಡೆದು ಉನ್ನತ ಕಲಾಶಿಕ್ಷಣ ಪಡೆದವರು. ಇಂತಹ ಪ್ರತಿಭಾವಂತ, ಬಹುಮುಖೀ ಅನುಭವಗಳಿಗೆ ತೆರೆದುಕೊಂಡ ಮನಸ್ಸಿನ ಕಲಾವಿದೆಯ ಸಾಮಾಜಿಕ ಕಾಳಜಿ, ಬದುಕು ಮತ್ತು ಕಲಾಭಿವ್ಯಕ್ತಿಯ ಬಗೆಗಿನ ನಿರಂತರ ಕಾಳಜಿ, ಗ್ಲಾಮರ್‌ಗಿಂತ ಭಿನ್ನವಾದ ಅರ್ಥಾಭಿವ್ಯಕ್ತಿಯ ಅದಮ್ಯ ಉತ್ಸಾಹಗಳು ಅಪೂರ್ವವಾದುವು. ಇತಿಹಾಸದ ಅಧ್ಯಯನ ಮಾಡಿದ ಅವರಿಗೆ ಪರಂಪರೆಯ ಬಗೆಗೆ ಅತೀವ ಆಸಕ್ತಿ. ಆಚರಣೆಗಳು ಅವರಿಗೆ ಗೊಡ್ಡು ಅಲ್ಲ, ಮೃತ ಅಲ್ಲ-ಅರ್ಥ ಸಾಧ್ಯತೆಗಳ ಭಂಡಾರ. ಸೆಗಣಿ ಮತ್ತು ಅಂಟನ್ನು ಬೆರೆಸಿ ಅದನ್ನೆ ಬಣ್ಣವಾಗಿಸಿ ಚಿತ್ರ ರಚಿಸಿದರು. ಬೆರಣಿ ಜೋಡಿಸಿ ಸ್ಥಾಪನಾ ಕಲಾಕೃತಿ ಮಾಡಿದರು. ನೋಡುವ ಕಲೆಗೆ, ಸ್ಪರ್ಶ ಗುಣ ಮಾತ್ರವಲ್ಲದೆ ವಾಸನೆಯ ಮೌಲ್ಯವನ್ನೂ ಇವರು ಸೇರಿಸಿದರೆಂದು ಕೆಲವರು ಟೀಕಿಸಿದರೂ, ಅದು ಅದೇ ಅಲ್ಲ. ಗೋಮಯ ನಮ್ಮ ಪರಂಪರೆಯ ಅವಿನಾಭಾಗ. ಪರಿಶುದ್ಧತೆ, ಪಾವಿತ್ರ್ಯದ ಭಾವನೆಗಳೂ ಸೇರುತ್ತವೆ. ಅಲ್ಲದೆ ಸೆಗಣಿಯ ಉಪಯುಕ್ತತೆ, ಹಿಂದಿನಿಂದಲೂ ಬೆರಣಿ ತಟ್ಟುವ ಹೆಣ್ಣಿನ ಶ್ರಮದ ಬದುಕಿನ ಪಾತ್ರ ಎಲ್ಲ ಸೂಚ್ಯಾರ್ಥ ಶಕ್ತಿ ಹೊಂದಿವೆ. ಹೀಗಾಗಿ ಅವರ ರಚನೆಗಳು ವಿಶಿಷ್ಟವಾಗುತ್ತವೆ, ಪರಂಪರೆ ಮತ್ತು ವರ್ತಮಾನಗಳನ್ನು ಬೆಸೆದು ಮೂರನೆಯ ಅರ್ಥವನ್ನು ಸೃಷ್ಟಿಸುತ್ತವೆ.

ವರ್ಷದ ಹಿಂದೆ ಬೆಂಗಳೂರಿನಲ್ಲಿ 'ವಿಶ್ವ ಮಾಹಿತಿ ದಿನ'ದ ಸಂದರ್ಭದಲ್ಲಿ



ಅವರ ಒಂದು ಸ್ಥಾಪನಾ ಕಲೆ ಪ್ರದರ್ಶಿತವಾಯಿತು. ಮಾತು ಧ್ವನಿಪ್ರಧಾನವಾದುದು. ಮಾತಿನ ಮೂಲಕ ಏನೆಲ್ಲ ಅನುಭವ, ವಿಚಾರ, ಭಾವನೆಗಳನ್ನು ವ್ಯಕ್ತಪಡಿಸಬಹುದು. ಆದರೆ ದೃಶ್ಯಕಲೆಯ ಮಾಧ್ಯಮ ದೃಶ್ಯಭಾಷೆ. ಎಲ್ಲವನ್ನೂ ಆ ಭಾಷೆಯ ಮೂಲಕವೇ ವ್ಯಕ್ತಪಡಿಸಬೇಕು. ನಾವಾಡುವ ಮಾತಿಗೆ ಅದು ಕೇವಲ ಧ್ವನಿಗಳ ಸಮೂಹ ಮಾತ್ರ, ದೃಶ್ಯ ಭಾಷೆಗೆ ಈ ಮಿತಿ ಇಲ್ಲ. ದೃಶ್ಯಭಾಷೆಯ ಸಂಜ್ಞೆಗಳು ಬಹುಪಾಲು ಸಾರ್ವತ್ರಿಕವಾದುವು. ಸಂಪರ್ಕ, ಸಂವಹನಗಳ ಮಿತಿ ಕನ್ನಡ, ಹಿಂದಿ, ಇಂಗ್ಲಿಷ್ ಮುಂತಾದ ಭಾಷೆಗಳಿಗಾದರೆ ಆ ಮಿತಿ ಮತ್ತು ಅಂತರವನ್ನು ದಾಟುವ ಶಕ್ತಿ ದೃಶ್ಯಭಾಷೆಯದು. ಹೀಗೆ ಅಮೂರ್ತವಾದ ಧ್ವನಿ ಮಾಧ್ಯಮದ ಭಾಷೆಯನ್ನು ದೃಶ್ಯಮಾಧ್ಯಮದ ಭಾಷೆಯಾಗಿ ಪರವರ್ತಿಸಿ ತೋರಬಹುದೆ. ಶೀಲಾಗೌಡ ಅವರು



ಗುಣಮೌಲ್ಯವನ್ನು ಆಧರಿಸಿ, ಅದರ ಗುಣಸ್ವಭಾವವೂ ವ್ಯಕ್ತವಾಗುವಂತೆ ಕೃತಿರಚನೆ ಮಾಡುವುದು. ಮರದ ಶಿಲ್ಪಗಳೂ ಆಯಾ ಮರದ ಗುಣಧರ್ಮಕ್ಕೆ ತಕ್ಕಂತೆ ರೂಪುಗೊಳ್ಳುವುದು. ಗಂಟು ಮರದ ಶಿಲ್ಪದ ರೂಪ ಬೇರೆ, ಗಂಧದ ಅಥವಾ ಬೀಟೆ ಮರದ ಕೆತ್ತಿದ ರೂಪ ಬೇರೆ. ಕ್ಯಾಪ್ಟನ್ ರಾಜಾರಾಮ್ ಮರದ ರೆಂಬೆ ಕೊಂಬೆಗಳಿಂದ ಅವುಗಳದೇ ಆಕಾರ ಅನುಸರಿಸಿ ರೂಪಗಳ ರಚನೆ ಮಾಡುತ್ತಿದ್ದರು. ಬ್ರಾಂಕುಸಿಯ ಶಿಲ್ಪಗಳು ಮಾಧ್ಯಮ ಗುಣಸ್ವಭಾವಗಳ ಅಭಿವ್ಯಕ್ತಿಯೂ ಆಗುತ್ತಿದ್ದುವು. ಮೂರನೆಯ ಬಗೆ ಪರಂಪರೆಯ ಶಿಲ್ಪ ಮಾಧ್ಯಮಗಳನ್ನೇ ಕೈಬಿಟ್ಟು ದಿನನಿತ್ಯದ ವಸ್ತು ಸಾಮಗ್ರಿಯನ್ನು ಬಳಸಿ ಕಲಾಕೃತಿ ರಚಿಸುವುದು ಅಥವಾ ಸ್ಥಾಪಿಸುವುದು. ಇಲ್ಲಿ ಕಲಾವಿದರು ಕೃತಿಯ ಮೂಲಕ ಏನನ್ನು ಅಭಿವ್ಯಕ್ತಿಗೊಳಿಸುತ್ತಿದ್ದಾರೆ ಎನ್ನುವಲ್ಲಿ, ಆ ಮಾಧ್ಯಮ ಸಾಮಗ್ರಿ, ಪರಿಕರವೂ ಅರ್ಥಸೂಚ್ಯತೆಯ, ಸಂವಹನದ ಅವಿನಾಭಾಗವಾಗುತ್ತದೆ. ರಚನೆಯ ಪರಿಕಲ್ಪನೆ ಮಾತ್ರವಲ್ಲ, ಬಳಸಿದ ವಸ್ತು ಸಾಮಗ್ರಿಯೂ ಅರ್ಥಪೂರ್ಣವಾಗುತ್ತದೆ. ಶೀಲಾಗೌಡ ಅವರ 'ಎ ಬ್ಲಾಂಕೆಟ್ ಅಂಡ್ ದಿ ಸ್ಕೈ' ಅಂತಹ ಒಂದು ವಿಶಿಷ್ಟ ಕಲಾಕೃತಿ. ಅವರ ಕಲ್ಪನೆ, ಅದಕ್ಕಾಗಿ ಬಳಸಿದ ಸಾಮಗ್ರಿ, ಸಂಯೋಜಿಸಲು ಪಟ್ಟ ಶ್ರಮ ಎಲ್ಲವೂ ಮಹತ್ವ ಪಡೆಯುತ್ತವೆ. ಅದನ್ನೇ ಶೀಲಾ ಅವರು ಮಾಧ್ಯಮ ಅಥವಾ ಸಾಮಗ್ರಿಗಳೇ ಕಲ್ಪನೆಯನ್ನು ಚೋದಿಸುತ್ತವೆ ಎಂದುದು.

ಹಾಗೊಂದು ಸ್ಥಾಪನಾ ಕಲಾಕೃತಿ ರಚಿಸಿದರು. ನೀರಿನ ಕೊಳವೆಗಳನ್ನು ಅಡ್ಡವಾಗಿ, ಲಂಬವಾಗಿ ಜೋಡಿಸಿ ರೇಖೆಗಳ ಸಂಯೋಜನೆಯಂತೆ ರೂಪಿಸಿದರು. ಒಂದೊಂದು ಕಡೆ ಕೊಳವೆಗೆ ತೆರೆದ ಬಾಯಿ. ಈ ಕೊಳವೆಗಳ ವಿನ್ಯಾಸದ, ಮೂಲ ಕೊಳವೆಯನ್ನು ಗೋಡೆಯಲ್ಲಿನ ಗೂಡೊಂದರಲ್ಲಿ ಇಟ್ಟು ಅದಕ್ಕೆ ಟೇಪ್‌ರಿಕಾರ್ಡರಿನ ಸಂಪರ್ಕ ಕಲ್ಪಿಸಿ, ಅದರಲ್ಲಿ ಎ.ಎಸ್. ಮೂರ್ತಿಯವರ ಆಕಾಶವಾಣಿ ಪ್ರಸಾರದ 'ಒಂದು ಮಾತು' ಧ್ವನಿಸುರುಳಿಯನ್ನು ಹಾಕಿದರು. ಆ ಧ್ವನಿತರಂಗಗಳು ಕೊಳವೆಗಳ ಮೂಲಕ ಹಾಯ್ದು ತೆರೆದ ಕೊಳವೆಯ ಬಾಯಿಯಲ್ಲಿ ಕಿವಿ ಇಟ್ಟಾಗ ಕೇಳಿಸುತ್ತಿತ್ತು, ಕೆಲವೆಡೆ ಸ್ಪಷ್ಟ, ಕೆಲವೆಡೆ ಅಸ್ಪಷ್ಟ - ಅಂತರ ಅಡೆತಡೆಗಳಿಗೆ ತಕ್ಕಂತೆ. ಮಾತು ಇಲ್ಲಿ ದೃಶ್ಯರೂಪ ಪಡೆದಿತ್ತು. ಎಂದರೆ ಕನ್ನಡ ಬಲ್ಲವರಿಗೆ ಕನ್ನಡಮಾತು ಮತ್ತು ದೃಶ್ಯಾನುಭವ. ಕನ್ನಡ ಬಾರದವರಿಗೆ ಧ್ವನಿ ಮತ್ತು ದೃಶ್ಯ ಮಾತ್ರ. (ನ್ಯೂಯಾರ್ಕಿನಲ್ಲಿ ಇದು ಪ್ರದರ್ಶಿತವಾದಾಗ ಸಂಪರ್ಕ, ಮಾಹಿತಿ ಸಂವಹನಗಳಿಗೆ ಸಂಬಂಧಿಸಿದಂತೆ ಅದರ ಇತಿಮಿತಿ ಹಾಗೂ ಸಾಧ್ಯತೆಗಳ ಅರಿವು ಮೂಡಿಸಿತು).

"ಒಮ್ಮೊಮ್ಮೆ ಮಾಧ್ಯಮವೇ, ಸಾಮಗ್ರಿಗಳೇ, ಪರಿಕಲ್ಪನೆಯನ್ನು ಸೂಚಿಸುತ್ತವೆ" ಎನ್ನುತ್ತಾರೆ ಶೀಲಾಗೌಡ. ಇದನ್ನು ಒಪ್ಪಿ ಸ್ವೀಕರಿಸುವ ಮನಃಸ್ಥಿತಿ ಬರಲು ಕಾಲದ ದೃಷ್ಟಿಯಿಂದ ಬಹುದೂರ ಸಾಗಿ ಬಂದಿದ್ದೇವೆ. ವಾಸ್ತು ಮತ್ತು ಶಿಲ್ಪಗಳ ಉದಾಹರಣೆಯಿಂದ ಮೇಲಿನ ಹೇಳಿಕೆಯನ್ನು ಸ್ಪಷ್ಟಪಡಿಸಬಹುದು. ಇಲ್ಲಿ ಮೂರು ಬಗೆ ಅಥವಾ ಘಟ್ಟಗಳನ್ನು ಗುರುತಿಸಬಹುದು. ಒಂದನೆಯದು, ಶಿಲೆ, ಮರ, ಲೋಹ ಇತ್ಯಾದಿ ಮಾಧ್ಯಮ ಪರಿಕರ ಯಾವುದೇ ಇರಲಿ ಶಿಲ್ಪಿ ತನ್ನ ಕಲ್ಪನೆಯ ಕಲಾಕೃತಿ ರಚಿಸುವುದು. ಹಿಂದೆ ನಮ್ಮ ಗುಹಾದೇವಾಲಯಗಳಲ್ಲಿ ಸ್ತಂಭ, ಬೋದಿಗೆ, ತೊಲೆಗಳನ್ನು ಕಡೆದಿರುವುದನ್ನು ಕಾಣಬಹುದು. ಆಗ್ಗೆ ಮನೆಗಳಿಗೆ ಮರದ ಕಂಬ-ತೊಲೆಗಳ ಮೇಲೆ ಚಾವಣಿ ನಿಲ್ಲಿಸಬೇಕಿತ್ತು. ಕಲ್ಲಿನ ಗುಹೆ ಕೊರೆದು ದೇವಾಲಯ ನಿರ್ಮಿಸಿದಾಗಲೂ ಅದರ ಅನುಕರಣೆ ಮಾಡಿ ಕಂಬ-ತೊಲೆಗಳನ್ನು ಕೆತ್ತಿದರು. ರಚನೆ ಮುಖ್ಯ, ಮಾಧ್ಯಮವಲ್ಲ. ಒಂದು ವಿಗ್ರಹವನ್ನು ತಮ್ಮ ಕಲ್ಪನೆಗೆ ತಕ್ಕಂತೆ ಶಿಲೆಯಲ್ಲೂ ಕೆತ್ತಿದರು, ಮರದಲ್ಲೂ ಕೆತ್ತಿದರು ಹಾಗೇ ಲೋಹದಲ್ಲೂ ಎರಕ ಹೊಯ್ದರು. ವಿಗ್ರಹ ಕಲ್ಪನೆಗೆ ಪ್ರಾಧಾನ್ಯ. ಎಂತಹ ಶಿಲೆ ಎಂಬುದರ ಮೇಲೆ ಸರಳ ಕೆತ್ತನೆ, ಸಂಕೀರ್ಣತೆ, ಅಲಂಕಾರಗಳು ನಿರ್ಧಾರವಾಗುತ್ತಿದ್ದುವು. ಬಳಪದ ಕಲ್ಲು ಮೃದುಶಿಲೆ, ಆದ್ದರಿಂದ ಸೂಕ್ಷ್ಮ ಅಲಂಕಾರ ಸಾಧ್ಯವಾಯಿತು. ಎರಡನೆಯ ಬಗೆ ಮಾಧ್ಯಮ ಪರಿಕರವನ್ನು ಅದರ

ಶೀಲಾ ಅವರ ಸಾಮಾಜಿಕ ಕಾಳಜಿ, ಸುತ್ತಲ ದಿನನಿತ್ಯದ ಬದುಕಿಗೆ, ಘಟನೆಗಳಿಗೆ ಕಲಾತ್ಮಕವಾಗಿ ಸ್ಪಂದಿಸುವ ರೀತಿ ವಿಶಿಷ್ಟ ಎಂದದ್ದು ಈ ಕಾರಣದಿಂದ. ನಾವು ದಿನನಿತ್ಯ ನಮ್ಮ ನಗರ ಪಟ್ಟಣಗಳಲ್ಲಿ ರಸ್ತೆಗೆ ಟಾರು ಹಾಕುವವರನ್ನು ಕಾಣುತ್ತೇವೆ. ಆದರೆ ಅವರ ಬದುಕು, ವಾಸ್ತವ್ಯಗಳ ಕಡೆ ಗಮನ ಹರಿಯುವುದೇ ಇಲ್ಲ. ಒಂದು ಭಾಗದಲ್ಲಿ ರಸ್ತೆ ಕಾರ್ಯ ಪ್ರಾರಂಭವಾದಾಗ ಅಲ್ಲೇ ಎಲ್ಲಾದರೂ ಖಾಲಿ ಜಾಗ ಇದ್ದಲ್ಲಿ ಅವರ ವಾಸ್ತವ್ಯವೂ ಸಹ ಅಥವಾ ಕೊಳೆಗೇರಿಗಳಂತೂ ಇದ್ದೆ ಇವೆ. ಟಾರು ಡ್ರಮ್ಮುಗಳನ್ನೇ ಕತ್ತರಿಸಿ, ಚಪ್ಪಟೆಗೊಳಿಸಿ ತಗಡಿನಲ್ಲಿ ವಾಸದ 'ಮನೆ'ಗಳೆಂಬ ಗೂಡುಗಳು. ಟಾರಿನ ಒಡನಾಟದ ಶ್ರಮದ ದುಡಿಮೆ, ಗೂಡಿನಲ್ಲಿ ವಾಸ-ಆ ಸಂಕಷ್ಟದ ಯಾಂತ್ರಿಕ ಬದುಕು. ಅದರ ನಡುವೆಯೂ



ಅವರಿಗೆ ಮನಸ್ಸಿಲ್ಲವೆ, ಕನಸುಗಳಿಲ್ಲವೆ ಎನಿಸದಿರದು. 'ಎ ಬ್ಲ್ಯಾಂಕೆಟ್ ಅಂಡ್ ದಿ ಸ್ಕೈ'ನಲ್ಲಿ ಆ ಎಲ್ಲ ಬದುಕು, ಸಂಕಷ್ಟ, ಕನಸುಗಳನ್ನು ಕಲಾತ್ಮಕವಾಗಿ ಮೂರ್ತೀಕರಿಸಿದ್ದಾರೆ. ಟಾರು ಡ್ರಮ್ಮುಗಳನ್ನೇ ಕತ್ತರಿಸಿ ಬೆಸೆದು ಮೂರು ಅಂತಸ್ತಿನ ರೂಪವೊಂದನ್ನು ಸೃಷ್ಟಿಸಿದ್ದಾರೆ. ಕೆಳ ಅಥವಾ ನೆಲ ಅಂತಸ್ತಿನಲ್ಲಿ ಒಬ್ಬರು ಬಗ್ಗಿ ಒಳಹೋಗುವಷ್ಟು ಕಿಂಡಿ ಬಾಗಿಲು. ಒಳಗೆ ಒಬ್ಬರು ಕಾಲು ಮಡಚಿ ಮಲಗುವಷ್ಟು ಸ್ಥಳ, ಹೊದಿಕೆ ದಿಂಬು. ಇದು ಮನೆಗೂಡಿನ ಕ್ಲೋಸ್ ಅಪ್ ಎನ್ನೋಣ. ಎರಡನೆಯ ಅಂತಸ್ತಿನ ಟಾರ್ ತಗಡಿನ ನೆಲ ಹಾಸನ್ನು T ಆಕಾರದಲ್ಲಿ ಚಿಕ್ಕದಾಗಿ ಅಲ್ಲಲ್ಲಿ ಗುಂಪಾಗಿ ಕತ್ತರಿಸಿ, ಮೇಲೆಬ್ಬಿಸಿದೆ. ಅದನ್ನು ನೋಡಲು ಆಗುವಂತೆ ಒಂದು ಪಕ್ಕದಲ್ಲಿ ಆಯತಾಕಾರದ ತೆರೆದ ಕಿಂಡಿಯಿದೆ. ನೋಡಿದರೆ ಗೂಡುಗಳ ಕೊಳೆಗೇರಿಯಂತೆ ಕಾಣುವ ದೃಶ್ಯ. ಆ ಶ್ರಮಿಕರ ವಾಸದ ಕೇರಿಯ ದೃಶ್ಯ. ಅದರ ಮೇಲೆ ಚಾವಣಿಯ ಭಾಗ, ಒಳಗಿನಿಂದ ನೋಡಿದರೆ ಚಾವಣಿಯಲ್ಲಿ ನೂರಾರು ರಂಧ್ರಗಳಿಂದ ಹೊರಗಿನ ಬೆಳಕು ತೂರುತ್ತಿದೆ-ಕತ್ತಲೆಯ ರಾತ್ರಿಯಲ್ಲಿ ನಕ್ಷತ್ರಗಳು ಮಿನುಗುವಂತೆ, ನೆಲದ ಇಕ್ಕಟ್ಟಿನ ಗೂಡಿನಿಂದ ಕೇರಿ, ಅನಂತರ ತೆರೆದ ಆಕಾಶದವರೆಗೆ ಅವರ ವಾಸ್ತವ್ಯ, ಟಾರಿನ ಡ್ರಮ್ಮು-ತಗಡುಗಳೊಡನೆಯ ನಿರಂತರ ಕಾರ್ಪಣ್ಯದ ಬದುಕು—ನಮ್ಮ ಬದುಕನ್ನು 'ಸರಾಗ'ಗೊಳಿಸುವವರ ಬದುಕು. ಇಲ್ಲಿ ಟಾರು ಡ್ರಮ್ಮು ತಗಡುಗಳು ಚಿಂದಿ ಹೊದಿಕೆ ಮುಂತಾಗಿ ಎಲ್ಲ ಸೂಚನ ಸಂಜ್ಞೆಗಳಾಗಿ ನಮ್ಮ ಮನಸ್ಸನ್ನು ಕಾಡುತ್ತವೆ. ದಿನನಿತ್ಯ ಕಂಡರೂ ಗಮನಿಸದಿರುವ ಒಂದು ಜೀವನ ಕ್ರಮ-ವ್ಯವಸ್ಥೆಯ ಬಗ್ಗೆ ಗಮನ ಕೇಂದ್ರೀಕರಿಸಿ ಆ ಸಂಕಷ್ಟದ ಬದುಕಿನ ಏನೆಲ್ಲ ಭಾವನೆ, ಅನುಭವಗಳನ್ನು ಕಟ್ಟಿಕೊಡುತ್ತವೆ. ಇದೊಂದು ಅಪೂರ್ವ ಸೃಷ್ಟಿ. ಒಂದು ಬದುಕಿನ ಸಾಮಗ್ರಿ, ಅಂಶಗಳನ್ನೆ ಬಳಸಿ ಆ ಮೂಲಕ ಅರ್ಥಸಾಧ್ಯತೆಗಳನ್ನು ತೆರೆಯುವ ಬಗೆ. ಹೀಗೇ ಶೀಲಾಗೌಡ ಅವರ ಇನ್ನೊಂದು ಕಲಾ ರಚನೆ, ಸ್ಥಳ ನಿರ್ದಿಷ್ಟ ಕಲಾಕೃತಿ ಅಥವಾ ಅರ್ಥ್‌ವರ್ಕ್ 'ಸಾಕ್ಷಿ ಗುಡ್ಡ, ಸಾಕ್ಷಿ ಗೋಡೆ' ಸಹ ಒಂದು ನೂತನ ಕಲ್ಪನೆ. ಅದು ದೇಶಾದ್ಯಂತ ಹೆಸರು ಗಳಿಸಿತು. ಶೀಲಾ ಗೌಡ ಅವರು ನಮ್ಮ ನಡುವಿನ, ಕಲೆಯಲ್ಲಿ ನಿರಂತರ ಅರ್ಥ ಸಾಧ್ಯತೆಗಳನ್ನು ಅರಸುವ, ಸಾಮಾಜಿಕ ಬದ್ಧತೆಯುಳ್ಳ ಕಲಾವಿದೆ. ❑

## ಆಕೆಯೊಂದು ಗುಲಾಬಿ

ಆಕೆಯೊಂದು ಗುಲಾಬಿ
ನಿಜ
ಪಟ್ಟ ನೋವುಗಳೆಲ್ಲಾ
ಮುಳ್ಳಾಗಿ ಮಾರ್ಪಟ್ಟು
ಆಗೊಂದು
ಈಗೊಂದು
ಹೂನಗೆ!

ಅದೇನೊ ಕೀಳಲು
ಧಾವಿಸಿದವರಿಗೆ
ಮುನಿದು
ಚುಚ್ಚುವಳು

ಹೂಗಳೆಲ್ಲವ ಕಿತ್ತು
ಬರಿದಾಗಿಸಿದ ದಿನ
ಇರುಳೆಲ್ಲಾ ನೊಂದು
ಮಿಡಿದ ಅಶ್ರು ಬಿಂದು
ಮುಂಜಾನೆ ಎಲೆಯ ಮೇಲೆಲ್ಲಾ!

ಹುಟ್ಟೇ ಮುಳ್ಳಾಗಲೆಂಬಂತೆ
ಮುಳ್ಳೇ ತಾನಾದಂತೆ
ನೊಂದ ಜೀವಕೆ
ಸಿಕ್ಕೀತೇ ತಂಪು ?

ಈಗೀಗ
ಕೈತೋಟ
ಪಾರ್ಕುಗಳಲ್ಲೆಲ್ಲಾ
ಬಣ್ಣ ಬಣ್ಣದ
ಹೂ ನಗೆ
ಬಕವಿಲ್ಲ
ಪ್ರದರ್ಶನಕೆ!

● ಪ್ರಭಾಮಣಿ ನಾಗರಾಜು

## ಮುಖವಾಡದೊಳಗೆ



ಏನೆಲ್ಲಾ ಕಹಿ ಉಂಡರೂ
ಮೌನದ ಚಿಪ್ಪೊಳಗೆ ಹೂತು
ಜೀವ ದಹಿಸುವ ತಂತು-ಮಾತು !

ಸುಡುಸುಡುವ ನಿಟ್ಟುಸಿರು
ಒಳಗೇ ಅದುಮಿಟ್ಟು
ಎಂದಿಗೂ ಹಡೆಯದ ಬಸಿರು-ಉಸಿರು !

ದಿಟ ಕಂಡರೂ ಕಣ್ಣುಮುಚ್ಚಿ
ಸದ್ದಿಲ್ಲದೇ ಒಳಗೇ ಬೆಚ್ಚಿ
ಏನೂ ಕಂಡಿಲ್ಲವೆಂಬ ಕಣ್ಣಾಟ-ಕಪಟ !

ಕಾದ ಸೀಸವೇ ಕಿವಿಗೆ ಎರೆದರೂ
ಕಿವಿ ಕಿವುಡಾಗಿಸುತ
ಜಾಣ ಕಿವುಡಿನ ನೂರು ಅಂಕ-ನಾಟಕ !

ದಿಟ ಸಟೆಯಾಗಿಸುತಾ
ಸಟೆ ದಿಟವಾಗಿಸುತಾ
ಸದಾ ದಿವ್ಯನಗೆ, ಬೆಂಕಿಯಿದ್ದರೂ
ಕಾಣದ ಹೊಗೆ!

ಅದೆ ! ಇಲ್ಲಿ ನಿರ್ವಿಕಾರ ನಿರ್ಲಿಪ್ತ
ನಿರಾಕಾರನಾಗಿಬಿಡುವುದೆಷ್ಟು ಸುಲಭ !
ಕ್ಷಮಿಸು! ದೇವರೇ ನಾನು ನೀನಾಗಲಾರೆ!

● ರೂಪಾ, ಹಾಸನ

## ಮಹಿಳೆಯರ ಮೇಲಿನ ಆಸಿಡ್ ದಾಳಿ ವಿರೋಧಿ ಪ್ರಚಾರಾಂದೋಲನ ಮತ್ತು ಹೋರಾಟ (CSAAAW)

ದಿನಾಂಕ 8.9.07ರ ಪ್ರತಿಭಟನಾ ಕಾರ್ಯಕ್ರಮದಲ್ಲಿ ಪ್ರಕಟಿಸಿದ ಕರಪತ್ರ

# ಹೀನಾ ಫಾತೀಮಾಳ ಸಾವಿಗೆ ಸರ್ಕಾರದ ಬೇಜವಾಬ್ದಾರಿಯೇ ಕಾರಣ !

ದಿನಾಂಕ: 8.9.2007ರಂದು ಆಸಿಡ್ ದಾಳಿಗೆ ಬಲಿಯಾದ ಹೀನಾ ಫಾತಿಮಾಳ ಸಾವಿಗೆ ಸರ್ಕಾರದ ಬೇಜವಾಬ್ದಾರಿಯೇ ಕಾರಣವೆಂದು, ಈ ಬೇಜವಾಬ್ದಾರಿಯ ವಿರುದ್ಧ, ಮಹಿಳೆಯರ ಮೇಲಿನ ಆಸಿಡ್ ದಾಳಿ ವಿರೋಧಿ ಪ್ರಚಾರಾಂದೋಲನ ಸಂಘಟನೆಯ ಮೂಲಕ ಪ್ರತಿಭಟನೆ ನಡೆಸಲಾಯಿತು. ವಿವಿಧ ಬೇಡಿಕೆಗಳನ್ನು ಸರ್ಕಾರದ ಹಾಗೂ ಸಾರ್ವಜನಿಕರ ಮುಂದಿಟ್ಟು ಅವುಗಳನ್ನು ಜಾರಿಗೆ ತರುವಂತೆ ಒತ್ತಾಯಿಸಿ, ಮೈಸೂರು ಬ್ಯಾಂಕಿನಿಂದ ಟೌನ್‌ಹಾಲ್‌ವರೆಗೆ ಪ್ರತಿಭಟನಾ ಮೆರವಣಿಗೆಯನ್ನು ನಡೆಸಿ, ಸಭೆಯನ್ನು ಹಮ್ಮಿಕೊಳ್ಳಲಾಗಿತ್ತು. ಸಭೆಯಲ್ಲಿ ಭಾಗವಹಿಸಿದ ವಿವಿಧ ಸಂಘಟನೆಯ ಪ್ರತಿನಿಧಿಗಳು ನ್ಯಾಯಾಲಯದ ವಿಳಂಬ ಗತಿ, ಆಸಿಡ್ ಸುಲಭವಾಗಿ ದೊರೆಯದಂತೆ ನಿಯಂತ್ರಣ, ಸರ್ಕಾರದ ನಿರ್ಲಕ್ಷ್ಯ, ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗಾಗಿ ವಿಶೇಷ ವಾರ್ಡ್ ಸೌಲಭ್ಯ ಒದಗಿಸಿ ಕೊಡುವಂತೆ ಒತ್ತಾಯಿಸಿ ಮಾತನಾಡಿದರು. ಆಸಿಡ್ ದಾಳಿಗೆ ಒಳಗಾದ ಮಹಿಳೆಯರು ಹಾಗೂ ಮೈಸೂರು, ತುಮಕೂರು, ಕೊಳ್ಳೆಗಾಲ, ಚನ್ನಪಟ್ಟಣದಿಂದ ಬಂದ ಮಹಿಳೆಯರು ಹಾಗೂ ಮಾನಸ, ವಿಮೋಚನಾ, ಹೆಂಗಸರ ಹಕ್ಕಿನ ಸಂಘ ಮುಂತಾದ ಸಂಘಟನೆಗಳು ಪ್ರತಿಭಟನಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದವು.

ಆಸಿಡ್ ದಾಳಿಗೆ ಬಲಿಯಾದ ಅಮಾಯಕ ಮಹಿಳೆಯರ ಪಟ್ಟಿಗೆ ಈಗ ಹೀನಾ ಫಾತಿಮಾ ಮತ್ತೊಂದು ಸೇರ್ಪಡೆ! ದಿನನಿತ್ಯ ಯಾವುದೋ ಒಂದು ನೆಪದಲ್ಲಿ ಪಿತೃಪ್ರಧಾನ ವ್ಯವಸ್ಥೆಗೆ ಮಹಿಳೆಯರ ಬಲಿ ನಡೆಯುತ್ತಲೇ ಇದೆ. ತಮ್ಮ ಹಕ್ಕುಗಳಿಗಾಗಿ ಹೋರಾಡುವ ಕಾರ್ಮಿಕ ಮಹಿಳೆಯರ ಮೇಲೆ ಆಕ್ರಮಣ ಮಾಡುವುದಾಗಲೀ, ಸಹೋದ್ಯೋಗಿಗಳಿಗೆ ಲೈಂಗಿಕ ಕಿರುಕುಳ ನೀಡುವುದಾಗಲೀ ಅಥವಾ ತಮ್ಮ ಆಧಿಪತ್ಯದ ಶಕ್ತಿ ಪ್ರದರ್ಶಿಸಲು ಅತ್ಯಾಚಾರ ನಡೆಸುವುದಾಗಲಿ ಎಲ್ಲವೂ ಅದರ ಬೇರೆ ಬೇರೆ ರೂಪಗಳಷ್ಟೇ. ಮಹಿಳೆಯರ ಮೇಲಿನ ಇಂತಹ ಹಿಂಸೆಯ ಮತ್ತೊಂದು ಭಯಾನಕ ರೂಪವಾದ ಆಸಿಡ್ ಎರಚುವಿಕೆಯನ್ನು ತಡೆಯಬೇಕೆಂದು ಕಾಳಜಿಯುಳ್ಳವರ, ಆಸಿಡ್ ದಾಳಿಗೊಳಗಾದ ಮಹಿಳೆಯರ ಹಾಗೂ ಹಲವು ಮಹಿಳಾ ಮತ್ತು ಮಾನವ ಹಕ್ಕು ಸಂಘಟನೆಗಳ ಒಕ್ಕೂಟವಾದ 'ಸೀಸಾ' (CSAAAW) ಕಳೆದ 5 ವರ್ಷಗಳಿಂದ ಸತತವಾಗಿ ಪ್ರಯತ್ನ ನಡೆಸುತ್ತಾ ಬಂದಿದೆ. ಆದರೆ ಈ ಕುರಿತು ಸರ್ಕಾರ ಮತ್ತು ಅದರ ಅಂಗಸಂಸ್ಥೆಗಳ ನಿರ್ಲಕ್ಷ್ಯ ಫಾತಿಮಾಳಂತಹ ಎಷ್ಟೋ ಮಹಿಳೆಯರು ಪ್ರಾಣ ತೆರುವುದಕ್ಕೂ ಇನ್ನೂ ಹಲವರ ಬದುಕು ಸುಟ್ಟು ಬೂದಿಯಾಗುವುದಕ್ಕೂ ಕಾರಣವಾಗಿದೆ.

ಕೇವಲ 26 ವರ್ಷದ ಫಾತಿಮಾ ನಾಲ್ವರು ಪುಟ್ಟಮಕ್ಕಳ ತಾಯಿ. ಮದುವೆಯಾದಾಗಿನಿಂದಲೂ ಬಗೆಬಗೆಯಲ್ಲಿ ಹಿಂಸಿಸುತ್ತಾ ಬಂದ ಗಂಡನಿಂದಲೇ ಕೊನೆಗೆ ಇದೇ ಆಗಸ್ಟ್ 8ರಂದು ಆಸಿಡ್ ದಾಳಿಗೊಳಗಾಗಿ, 80%ರಷ್ಟು ಸುಟ್ಟ ಗಾಯಗಳಿಂದ ನರಳಿ, ದಿನಾಂಕ 21ರಂದು ಕೊನೆಯುಸಿರೆಳೆದಳು. ಹೀಗೆ ಆಸಿಡ್ ದಾಳಿಗೆ ಬಲಿಯಾದವರಲ್ಲಿ ಈಕೆ 9ನೇಯವಳು! ಸರ್ಕಾರ ಇದನ್ನು ತಡೆಯಲು ಮುಂದಾಗುವುದಕ್ಕೆ ಇನ್ನೆಷ್ಟು ಬಲಿಗಳಾಗಬೇಕೋ?!

2002ರಿಂದಲೂ ಹೀಗೆ ಆಸಿಡ್ ದಾಳಿಗೊಳಗಾಗುವವರ ಪರಿಸ್ಥಿತಿಯನ್ನು, ಅವರಿಗೆ ನೆರವಾಗಬೇಕಾದ ಅಗತ್ಯವನ್ನೂ, ಮುಂದಿನ ದಿನಗಳಲ್ಲಿ ಇಂತಹ ಭೀಕರ ದಾಳಿಗಳನ್ನು ತಡೆಯಲು ಸರ್ಕಾರ ಕೈಗೊಳ್ಳಬೇಕಾದ ಮುಂಜಾಗ್ರತಾ ಕ್ರಮಗಳನ್ನೂ ಮನಗಾಣಿಸಲು ಸಾಧ್ಯವಿರುವ ಎಲ್ಲಾ ಮಾರ್ಗಗಳಲ್ಲೂ ಸೀಸಾ (CSAAAW) ಪ್ರಯತ್ನಿಸಿದೆ. ಆದರೆ ನಮ್ಮ ಮತ್ತು ನಮ್ಮೊಂದಿಗೆ ಮೊದಲಿನಿಂದಲೂ ಕೈ ಜೋಡಿಸಿರುವ ಹಲವು ಕಾಳಜಿಯುಳ್ಳ ನಾಗರಿಕರ, ಸಂಘಟನೆಗಳ ಒತ್ತಾಯಕ್ಕೆ ಮೇಲ್ನೋಟ್ಟದ ಕೆಲವು ಯೋಜನೆಗಳನ್ನೂ, ಅದಕ್ಕಾಗಿ ಒಂದು ಕೋಟಿ ರೂ.ಗಳನ್ನೂ ಘೋಷಿಸಿದ್ದು ಬಿಟ್ಟರೆ, ಪ್ರಾಮಾಣಿಕ ಪ್ರಯತ್ನಕ್ಕೆ ಸರ್ಕಾರ ಮುಂದಾಗಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಹೈಕೋರ್ಟ್ ಒಂದು ವರ್ಷದ ಹಿಂದೆ ಕೂಡಲೇ ಜಾರಿ ಮಾಡುವಂತೆ ನೀಡಿದ ಪರಿಹಾರ ಹಾಗೂ ಪುನರ್ವಸತಿಗೆ ಸಂಬಂಧಿಸಿದ ಆದೇಶವನ್ನೇ ಇನ್ನೂ ಜಾರಿ ಮಾಡಿಲ್ಲ! ನಮ್ಮ ಪ್ರಚಾರದಿಂದ ಹಾಗೂ ಮಾಧ್ಯಮಗಳ ವರದಿಗಳಿಂದ ಆಸಿಡ್ ದಾಳಿಗೊಳಗಾಗುತ್ತಿರುವವರ ದುಸ್ಥಿತಿಯ ಹಾಗೂ ಸಾಮಾನ್ಯ ಮಹಿಳೆಯರು ಅದರಿಂದಾಗಿ ಅನುಭವಿಸುತ್ತಿರುವ ಅಭದ್ರತೆಯ ಸಂಪೂರ್ಣ ಅರಿವಿದ್ದರೂ ಇನ್ನೂ ಯಾವುದೇ ನಿರ್ದಿಷ್ಟ ಕ್ರಮಕ್ಕೆ ಮುಂದಾಗದಿರುವುದು ಎಲ್ಲರಲ್ಲೂ ನೋವನ್ನೂ ಆಕ್ರೋಶವನ್ನೂ ಮೂಡಿಸಿದೆ.

**ನಮ್ಮ ಬೇಡಿಕೆಗಳು :**

- ಆಸಿಡ್ ದಾಳಿಗಳನ್ನು ತಡೆಗಟ್ಟಲು ತುರ್ತು ಕ್ರಮಗಳನ್ನು ಕೈಗೊಳ್ಳಬೇಕು. ಆಸಿಡ್ ಸುಲಭವಾಗಿ ದೊರೆಯದಂತೆ ನಿಯಂತ್ರಣ ಹೇರಬೇಕು. ಟಿ.ವಿ./ ಸಿನೆಮಾಗಳಲ್ಲಿ ಆಸಿಡ್ ದಾಳಿಗಳನ್ನು ತೋರಿಸುವುದನ್ನು ಕಡ್ಡಾಯವಾಗಿ ನಿಲ್ಲಿಸಬೇಕು. ದಾಳಿಯ ಪ್ರಕರಣಗಳಲ್ಲಿ ಶೀಘ್ರವಾಗಿ ತೀವ್ರ ಶಿಕ್ಷೆ ನೀಡಬೇಕು.
- ಈಗಾಗಲೇ ಆರಂಭವಾಗಿರುವ ಪರಿಹಾರ ಹಾಗೂ ಪುನರ್ವಸತಿ ಪ್ರಕ್ರಿಯೆಯನ್ನು ಕೂಡಲೇ ಮುಗಿಸಿ, ಮಂಜೂರಾಗಿರುವ ಹಣವನ್ನು ಬಿಡುಗಡೆ ಮಾಡಬೇಕು.
- ಹೈಕೋರ್ಟ್‌ನಲ್ಲಿ ಸೀಸಾ (CSAAAW) ದಾಖಲಿಸಿರುವ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯ ವಿಚಾರಣೆಯನ್ನು ಕೂಡಲೇ ಪೂರ್ಣಗೊಳಿಸಿ, ಅಗತ್ಯ ಕ್ರಮಗಳಿಗೆ ಮುಂದಾಗಬೇಕು.
- ತಕ್ಷಣದ ಚಿಕಿತ್ಸೆಯ ವ್ಯವಸ್ಥೆಯಿಲ್ಲದೆ ಆಸಿಡ್ ದಾಳಿಗೊಳಗಾದವರು ಸಾವಿಗೀಡಾಗುತ್ತಿದ್ದಾರೆ. ಸರ್ಕಾರಿ ಆಸ್ಪತ್ರೆಗಳಲ್ಲಿ ಸರಿಯಾದ ಚಿಕಿತ್ಸೆ ದೊರೆಯುವಂತಾಗಬೇಕು. ಆದರೆ ಖಾಸಗಿ ಆಸ್ಪತ್ರೆಗಳು ಮಾನವೀಯತೆಯನ್ನೂ ಮರೆತು ದಾಳಿಗೊಳಗಾದವರಿಗೆ ಚಿಕಿತ್ಸೆ ನಿರಾಕರಿಸುತ್ತಿರುವುದನ್ನು ತಡೆಯಬೇಕು. ಅಲ್ಲಿನ ಖರ್ಚು ವೆಚ್ಚವನ್ನು ಸರ್ಕಾರವೇ ಭರಿಸಬೇಕು.
- ಮಹಿಳೆಯರ ಮೇಲಿನ ಆಸಿಡ್ ದಾಳಿಗಳನ್ನು ತಡೆಯಲು ವ್ಯಾಪಕವಾಗಿ ಸಾರ್ವಜನಿಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.




# ಲೈಂಗಿಕ ವೃತ್ತಿನಿರತರ ಕಥೆ-ವ್ಯಥೆ

• ಹೆಚ್.ಎಸ್. ರಾಜೇಶ್ವರಿ

ಲೈಂಗಿಕ ಕಾರ್ಯಕರ್ತೆಯರ ಬದುಕಿನ ಹಲವು ಮಜಲುಗಳ ಚಿತ್ರವನ್ನು ವಾಸ್ತವದ ನೆಲೆಯಲ್ಲಿ ಕುಸುಮಾ ಶಾನಭಾಗ ಅವರು ಬರೆದ 'ಕಾಯದ ಕಾರ್ಪಣ್ಯ' (ಲೈಂಗಿಕ ವೃತ್ತಿ ನಿರತರ ಕಥೆ-ವ್ಯಥೆ) ನೀಡುತ್ತದೆ.

ಕುಸುಮಾರವರು ತಮ್ಮನ್ನು ಬಹುದೀರ್ಘಕಾಲ ಪ್ರಾಮಾಣಿಕತೆ ಹಾಗೂ ಬದ್ಧತೆಯಿಂದ ಈ ಸಾಮಾಜಿಕ ಸಮಸ್ಯೆಯ ಸುತ್ತ ತೊಡಗಿಸಿ ಕೊಂಡ ಪರಿಣಾಮವೇ ಈ ಕೃತಿ. ಆಕೆ ತಮ್ಮ ಸಂಪೂರ್ಣ ಶ್ರಮವನ್ನು ಹಾಕಿ ಬರೆದ ಮೂಲ ಕೃತಿಯ ಎರಡು ಪ್ರತಿಗಳು ಕಳೆದು ಹೋದದ್ದು ದುರಂತವೇ ಸರಿ.

ಕೃತಿಯ ಮೊದಲ ಭಾಗದಲ್ಲಿ, ವೇಶ್ಯಾವೃತ್ತಿಯ ಇತಿಹಾಸವನ್ನು ಗುರುತಿಸುತ್ತಾ ಪ್ರಾಚೀನಕಾಲದಲ್ಲಿ ಇದು ಹೇಗೆ 'ವೃತ್ತಿ'ಯಾಗಿ ಪರಿಗಣಿಸಲ್ಪಟ್ಟಿತ್ತು ಎಂಬುದನ್ನು ನಿದರ್ಶನಗಳ ಮೂಲಕ ವಿವರಿಸಲಾಗಿದೆ. ಮಹಿಳಾ ಚಳವಳಿಯು ಎತ್ತಿದ ಪ್ರಶ್ನೆಯಿಂದಾಗಿ, ಸೂಳೆ, ವೇಶ್ಯೆ ಎನ್ನುವ ಪದಕ್ಕೆ ಪರ್ಯಾಯವಾಗಿ 'ಲೈಂಗಿಕ ಕಾರ್ಯಕರ್ತೆ' ಎನ್ನುವ ಪದವನ್ನು ಬಳಸಲಾಗುತ್ತಿದೆ.

ಚಂದ್ರಗುಪ್ತ ಮೌರ್ಯನ ಕಾಲದಲ್ಲಿ-ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ-ಗಣಿಕಾ ಸ್ತ್ರೀಯರು ಎಂದು ಕರೆಯಲ್ಪಡುವ ಇವರು ಸಾಮಾಜಿಕ ವ್ಯವಸ್ಥೆಯ ಅಂಗವಾಗಿದ್ದು, ಉತ್ತಮವಾದ ಸ್ಥಾನ-ಮಾನ ಗೌರವವನ್ನು ಹೊಂದಿದ್ದರು. ಇದನ್ನು ಸಮಾಜ ವೃತ್ತಿಯಾಗಿ ಪರಗಣಿಸಿತ್ತು ಎಂಬುದಕ್ಕೆ ಈ ಮಹಿಳೆಯರು ರಾಜ್ಯದ ಬೊಕ್ಕಸಕ್ಕೆ ತೆರಿಗೆಯನ್ನು ನೀಡುತ್ತಿದ್ದುದೇ ನಿದರ್ಶನವಾಗಿದೆ. ಇದರ ಫಲವಾಗಿ ರಾಜ್ಯದಿಂದ ಇವರು ಅಗತ್ಯವಾದ ರಕ್ಷಣೆಯನ್ನು ಪಡೆಯುತ್ತಿದ್ದರು. ಈ ವೃತ್ತಿಯಲ್ಲಿದ್ದ ಮಹಿಳೆಯರು ಸಂಘಟಿತರಾಗಬಹುದಿತ್ತು. ಇವರ ಆರೋಗ್ಯ ರಕ್ಷಣೆ, ಅವಳ ಮೇಲೆ ನಡೆಯುತ್ತಿದ್ದ ಹಿಂಸೆಯ ರಕ್ಷಣೆಗಾಗಿ ಹಲವಾರು ಕಾನೂನುಗಳಿದ್ದವು ಎಂಬುದನ್ನು ಕುಸುಮಾ ಗುರುತಿಸುತ್ತಾರೆ.



**ಕಾಯದ ಕಾರ್ಪಣ್ಯ**
ಲೈಂಗಿಕ ವೃತ್ತಿನಿರತರ ಕಥೆ-ವ್ಯಥೆ
ಲೇ : ಕುಸುಮಾ ಶಾನಭಾಗ
ಹೇಮಾಂಶು ಪ್ರಕಾಶನ
ದೃಶ್ಯ, ದೇರೆಬೈಲು, ಮಂಗಳೂರು
ಬೆಲೆ : 75 ರೂ.

ಅನಂತರ ಮನುವಿನ ಕಾಲದಲ್ಲಿ ವೇಶ್ಯೆಯರ ಬಗ್ಗೆ ಕಠಿಣವಾದ ಧೋರಣೆಯನ್ನು ಕಾಣಬಹುದು. ವೇಶ್ಯೆಯರ ನಡೆ-ನುಡಿ ಹೇಗಿರಬೇಕು, ಕಠಿಣ ಶಿಕ್ಷೆ ಮುಂತಾದವುಗಳ ಸ್ವರೂಪವನ್ನು ಇಲ್ಲಿ ಗುರುತಿಸಲಾಗಿದೆ.

ಮೊಗಲರ ಕಾಲದಲ್ಲಿ ಕಂಡುಬರುವ ಪರಿಸ್ಥಿತಿ ಕುತೂಹಲಕಾರಿ. ಈ ಪದ್ಧತಿಯನ್ನು ನಿರ್ಮೂಲನ ಮಾಡುವುದರ ಜೊತೆಯಲ್ಲಿ, ಇದರಿಂದ ನುಣುಚಿ ಕೊಳ್ಳಲು ಪ್ರಯತ್ನಿಸುವ ಪುರುಷರನ್ನು ಹೊಣೆಗಾರರನ್ನಾಗಿ ಮಾಡುವ ಪ್ರಯತ್ನವನ್ನು ಇಲ್ಲಿ ಕಾಣಬಹುದು. ವೇಶ್ಯೆಯರ ಬಳಿ ಹೋಗುವ ಪುರುಷರು ನೊಂದಣಿ ಮಾಡಬೇಕಾಗಿತ್ತು. ತಲೆಹಿಡುಕರಿಗೆ, ಹೆಂಡತಿಯರನ್ನು ಈ ವೃತ್ತಿಗೆ ತಳ್ಳುವ ಪುರುಷರಿಗೆ ಗಲ್ಲು ಶಿಕ್ಷೆಯನ್ನು ನೀಡಲಾಗುತ್ತಿತ್ತು.

18ನೇ ಶತಮಾನದ ಅನಂತರ ವೇಶ್ಯಾವೃತ್ತಿ ವ್ಯಾಪಾರೀಕರಣಗೊಂಡಿದ್ದು, ಬ್ರಿಟಿಷರ ಆಕ್ರಮಣ, ಸೈನಿಕರು ನಮ್ಮ ದೇಶದಲ್ಲಿ ನೆಲೆಯೂರಿದ್ದು, ಇವರಿಗೆ ಹೆಣ್ಣು ಮಕ್ಕಳನ್ನು ಪೂರೈಕೆ ಮಾಡುತ್ತಿದ್ದ ವ್ಯವಸ್ಥೆ, ಬದಲಾದ ಆರ್ಥಿಕ-ಸಾಮಾಜಿಕ ಸ್ಥಿತಿಯಿಂದಾಗಿ ಅಪರಾಧೀಕರಣ ಪ್ರಾರಂಭವಾದದ್ದನ್ನು ಲೇಖಕಿ ಗುರುತಿಸುತ್ತಾರೆ. ವ್ಯಕ್ತಿಯ ಹಿಂದಿರುವ 'ಘನತೆ' ಮರೆಯಾಗಿ, ತಲೆ ಹಿಡುಕರು, ವೇಶ್ಯಾವಾಟಿಕೆಯ ಮಾಲಿಕರು, ಮಧ್ಯವರ್ತಿಗಳ, ಪುರುಷರ ಹಾವಳಿ, ಹೆಣ್ಣುಮಕ್ಕಳ ಸಾಗಾಣಿಕೆ, ಲೈಂಗಿಕ ರೋಗದ ಹರಡುವಿಕೆ ಇತ್ಯಾದಿಗಳು ಈ ಹಂತದಲ್ಲಿ ಪ್ರಾರಂಭವಾದವು.

ಪ್ರಸ್ತುತ ಸಂದರ್ಭದಲ್ಲಿ 400 ಕೆಂಪುದೀಪ ಪ್ರದೇಶಗಳಿದ್ದು ಶೇ. 80 ಭಾಗ ಕೆಳಜಾತಿ, ದಲಿತ, ಗಿರಿಜನ ಮಹಿಳೆಯರು ಈ ವೃತ್ತಿಯಲ್ಲಿದ್ದಾರೆ. ಬಡತನದ ಕಾರಣದಿಂದಾಗಿ ಬಹಳಷ್ಟು ಹೆಣ್ಣುಮಕ್ಕಳು ಈ ವೃತ್ತಿಗಿಳಿಯುತ್ತಾರೆ ಎನ್ನುವ ನಂಬಿಕೆ ಸಾಮಾನ್ಯವಾಗಿದೆ. ಆದರೆ, ಕುಸಮಾರವರು ಇದಕ್ಕೆ ಇನ್ನೂ ಹಲವಾರು ಕಾರಣಗಳಿರುವುದನ್ನು ಗುರುತಿಸುತ್ತಾರೆ. ಹೆಣ್ಣೆಂಬ ನಿರ್ಲಕ್ಷ್ಯ, ಮೋಸಹೋಗುವುದು, ನಗರದ ಮೋಜಿನ ಬದುಕಿಗೆ ಮಾರುಹೋಗುವುದು, ಐಷಾರಾಮಿ ಜೀವನ, ಒತ್ತಾಯಕ್ಕೆ ಬಲಿಯಾಗುವುದು ಹೀಗೆ ಅನೇಕ ಕಾರಣಗಳಿಂದ ಹೆಣ್ಣುಮಕ್ಕಳು ಈ ವೃತ್ತಿಗಿಳಿಯುತ್ತಾರೆ ಎನ್ನುತ್ತಾರೆ. ರಾಷ್ಟ್ರೀಯ ಹೆದ್ದಾರಿಗಳಲ್ಲಿ ಗ್ರಾಮೀಣ ಹೆಣ್ಣುಮಕ್ಕಳು ಹೇಗೆ ಈ ವೃತ್ತಿಯ ಬಲೆಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾರೆ ಎಂಬುದನ್ನು ವಿವರಿಸಲಾಗಿದೆ.

ರೋಮ್, ಚೀನಾ, ಫ್ರಾನ್ಸ್, ರಷ್ಯಾ, ಹಲವಾರು ದೇಶಗಳಲ್ಲಿ ಲೈಂಗಿಕ ಕಾರ್ಯಕರ್ತೆಯರ ಸ್ಥಿತಿಗತಿ ಮತ್ತು ಕಾನೂನು ಸೌಲಭ್ಯಗಳನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಮಲೇಷಿಯಾ ಹಾಗೂ ಥೈಲ್ಯಾಂಡ್‌ನಂತಹ ದೇಶಗಳಲ್ಲಿ ಆ ದೇಶಗಳ ರಾಷ್ಟ್ರೀಯ ಆದಾಯಕ್ಕೆ ಈ ವೃತ್ತಿ ಹೇಗೆ ನೆರವಾಗಿದೆ ಎಂಬುದನ್ನು ಗುರುತಿಸಲಾಗಿದೆ.

ದೇವದಾಸಿ ಪದ್ಧತಿಗೂ ವೇಶ್ಯಾವೃತ್ತಿಗೂ ಇರುವ ಸಂಬಂಧವನ್ನು ಹಾಗೂ ದೇವದಾಸಿ ಪದ್ಧತಿಯ ಆರಂಭದ ವಿವಿಧ ಕಾಲಘಟ್ಟವನ್ನು ಲೇಖಕಿ ಗುರುತಿಸುತ್ತಾರೆ. ಧಾರ್ಮಿಕ ಆಚರಣೆಯಲ್ಲಿ ಹೆಣ್ಣಿನ ಶೋಷಣೆಯ ಬೀಜವನ್ನು ಮೇಲ್ಜಾತಿ ಪುರುಷರು ಬಿತ್ತಿರುವುದು, ಹಾಗೂ ದೇವದಾಸಿಯರೆಲ್ಲಾ ದಲಿತ ಮಹಿಳೆಯರಾಗಿರುವುದು ಚಾರಿತ್ರಿಕ ಆಕಸ್ಮಿಕವೇನಲ್ಲ. ದೇವದಾಸಿ ಪದ್ಧತಿಯನ್ನು ನಿಷೇಧಿಸುವ ಕಾನೂನು, ಸ್ವಯಂ ಸೇವಾಸಂಸ್ಥೆಯ ಹೋರಾಟ ಗಳನ್ನು ದಾಖಲಿಸಲಾಗಿದೆ.

ವೇಶ್ಯಾವೃತ್ತಿಗೂ ಏಡ್ಸ್ ರೋಗಕ್ಕೂ ಹತ್ತಿರದ ಸಂಬಂಧವಿದೆ. ಏಡ್ಸ್ ರೋಗದ ವಾಹಕರು ವೇಶ್ಯೆಯರು ಎನ್ನಲಾಗಿದೆ. ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆಯವರ ಅಂದಾಜಿನಂತೆ 2005ರಲ್ಲಿ ಭಾರತದಲ್ಲಿ ಏಡ್ಸ್ ರೋಗಿಗಳ ಸಂಖ್ಯೆ 1,09,349. ಇದರಲ್ಲಿ ಮಹಿಳೆಯರು 31,982. ರೋಗ ತಗುಲಿದವರಲ್ಲಿ ಶೇ 37 ಮಂದಿ 30 ವರ್ಷದವರು. ಏಡ್ಸ್ ರೋಗದ ನಿಯಂತ್ರಣ, ಚಿಕಿತ್ಸಾ ಸೌಲಭ್ಯ, ಸರ್ಕಾರದ ಪಾತ್ರ ಮುಂತಾದ ಮಾಹಿತಿಯನ್ನು ಕೃತಿಯಲ್ಲಿ ನೀಡಲಾಗಿದೆ. ಕರ್ನಾಟಕದಲ್ಲಿ ಏಡ್ಸ್ ನಿಯಂತ್ರಣ, ಕೌನ್ಸಿಲಿಂಗ್ ಕೇಂದ್ರ ಮುಂತಾದವುಗಳಿಗಾಗಿ

3 ಕೋಟಿ ರೂ. ವೆಚ್ಚ ಮಾಡಿದ್ದು 9000 ಆರೋಗ್ಯ ಕಾರ್ಯಕರ್ತರಿಗೆ ತರಬೇತಿ ನೀಡಲಾಗಿದೆ.

1956ರಲ್ಲಿ "ಸ್ತ್ರೀಯರು ಮತ್ತು ಬಾಲಕಿಯರ ಅನೈತಿಕ ವ್ಯವಹಾರ ದಮನ ಅಧಿನಿಯಮ 1956" ಕಾನೂನನ್ನು ದೇಶದಲ್ಲಿ ಜಾರಿಗೆ ತರುವುದರ ಮೂಲಕ ವಿವಿಧ ರಾಜ್ಯದಲ್ಲಿದ್ದ ಕಾನೂನುಗಳನ್ನು ರದ್ದುಗೊಳಿಸಿ ಏಕರೂಪಿ ಕಾನೂನನ್ನು ಜಾರಿಗೊಳಿಸಲಾಯಿತು. 1986ರಲ್ಲಿ ಈ ಕಾನೂನನ್ನು ಪುನಃ ತಿದ್ದುಪಡಿ ಮಾಡಲಾಯಿತು. ಈ ತಿದ್ದುಪಡಿಯಲ್ಲಿ ವೇಶ್ಯಾವೃತ್ತಿಯನ್ನು ಒಂದು ಸಾಮಾಜಿಕ ಸಮಸ್ಯೆಯೆಂದು ಪರಿಗಣಿಸುವುದರ ಜೊತೆಯಲ್ಲಿ ಮಹಿಳೆ ಮತ್ತು ಮಕ್ಕಳ ಮೇಲೆ ನಡೆಯುವ ದೌರ್ಜನ್ಯವನ್ನು ಗಂಭೀರವಾದ ಅಪರಾಧವೆಂದು ಪರಿಗಣಿಸಲಾಯಿತು. ಅಪರಾಧ, ಶಿಕ್ಷೆಯ ವಿವರಣೆ, ನ್ಯಾಯಾಲಯದಲ್ಲಿ ವಿಚಾರಣೆಯ ಪ್ರಕ್ರಿಯೆ, ಪುನರ್ವಸತಿಯ ಸೌಲಭ್ಯ, ತಲೆಹಿಡುಕರ ಸಮಸ್ಯೆ, ವೇಶ್ಯಾಗೃಹ, ವೃತ್ತಿಯ ಮೇಲೆ ಪುರುಷರ ಹಿಡಿತ ಮುಂತಾದವುಗಳನ್ನು ವಿವರವಾಗಿ ಚರ್ಚಿಸಲಾಗಿದೆ.

ವೇಶ್ಯಾವೃತ್ತಿಯ ನಿರ್ಮೂಲನೆ ಸಾಧ್ಯವಿಲ್ಲವೆನ್ನುವ ಲೇಖಕಿ, ಇದನ್ನು ಒಂದು ವೃತ್ತಿಯಾಗಿ ಪರಿಗಣಿಸಬೇಕು ಎನ್ನುತ್ತಾರೆ. ಈ ಹೆಣ್ಣು ಮಕ್ಕಳು ಸಂಘಟಿತರಾಗುವುದರ ಜೊತೆಗೆ ಅವರ ಆರ್ಥಿಕ ಸ್ಥಿತಿ, ಆರೋಗ್ಯ, ಮಕ್ಕಳ ವಿದ್ಯಾಭ್ಯಾಸ ಮುಂತಾದವುಗಳ ಸುತ್ತ ಹೆಚ್ಚು ಗಮನ ವಹಿಸುವುದು ಮುಖ್ಯವಾಗುತ್ತದೆ ಎನ್ನುವುದರ ಜೊತೆಗೆ ಸ್ವಯಂಸೇವಾ ಸಂಸ್ಥೆಗಳು ಹಾಗೂ ಸರ್ಕಾರ ಈ ನಿಟ್ಟಿನಲ್ಲಿ ಕೆಲಸ ಮಾಡಬೇಕೆನ್ನುತ್ತಾರೆ ಲೇಖಕಿ.

ಸುಮಾರು ಒಂದು ದಶಕದ ಕಾಲದಲ್ಲೇ 1980 ರಿಂದ 1991ರವರೆಗೆ ಕುಸುಮಾರವರು ತಮ್ಮನ್ನು ಈ ಕೆಲಸದಲ್ಲೇ ತೊಡಗಿಸಿಕೊಂಡಿದ್ದರು. ನಂದ, ನಾಗರಾಜ ಸಹ ಇವರ ಜೊತೆಗಿದ್ದರು. ಲೈಂಗಿಕ ಕರ್ಯಕರ್ತೆಯಾಗಿದ್ದು ಸುಮಾರು 200 ಜನರನ್ನು ಭೇಟಿಯಾಗಿ ಅವರ ವೈಯಕ್ತಿಕ ಬದುಕಿನ ವಿವರವನ್ನು ನೀಡಿದ್ದಾರೆ. ಸಹವಾಸದಿಂದ ವೃತ್ತಿಗಿಳಿದ ಶಾರದ, ಸರೋಜ, ಅನಿವಾರ್ಯವಾಗಿ ವಿಷ ವರ್ತುಲದಲ್ಲಿ ಸಿಕ್ಕಿಹಾಕಿಕೊಂಡ ಕವಿತಾಳ ಜೀವನ, ಬಡತನದಿಂದ ವೃತ್ತಿಗಿಳಿದ ಹಲವಾರು ಮಹಿಳೆಯರ ದುರಂತ ಮಯ ಜೀವನದ ವ್ಯಥೆಯ ವಿವರವನ್ನು ಕುಸುಮಾ ನೀಡುತ್ತಾರೆ. ಈ ವೃತ್ತಿಯೊಳಗೆ ಹೆಣೆದು ಕೊಂಡಿರುವ ಗೂಂಡಾಗಳ ಹಿಂಸೆ, ಪೊಲೀಸ್ ದೌರ್ಜನ್ಯ, ಕ್ರೌರ್ಯದ ವಿವರಗಳು ಈ ವೃತ್ತಿಯ ಹಿಂದಿರುವ ಕರಾಳ ಛಾಯೆಯನ್ನು ಈ ಕೃತಿ ಬಿಚ್ಚಿಡುತ್ತದೆ.

ಈ ಹೆಣ್ಣು ಮಕ್ಕಳು ವೃತ್ತಿಗನುಗುಣವಾಗಿ ತಮ್ಮ ನಡೆ, ನುಡಿ ಸ್ವಭಾವ ಎಲ್ಲವನ್ನು ರೂಢಿಸಿಕೊಂಡಿರುತ್ತಾರೆ. ಬಹುಪಾಲು ಹೆಣ್ಣುಮಕ್ಕಳು ತಮ್ಮ ಬದುಕಿನ ಬಗ್ಗೆ ಹೇಳುವಾಗ ಸತ್ಯವನ್ನು ಮುಚ್ಚಿಡುತ್ತಾರೆ ಎನ್ನುವ ಕುಸುಮಾ, ಭೇಟಿಯಾದವರನ್ನೇ ಪುನಃ ಪುನಃ ಭೇಟಿಯಾಗುವುದರಿಂದ ಕ್ರಮೇಣ ಅವರ ಬದುಕಿನ ವಾಸ್ತವತೆಯನ್ನು ಗ್ರಹಿಸಲು ಸಾಧ್ಯವಾಗಿದೆ ಎನ್ನುತ್ತಾರೆ.

ಈ ಸಂದರ್ಶನಗಳಲ್ಲಿ ಕಂಡುಬರುವ ಮುಖ್ಯ ಅಂಶವೆಂದರೆ ಒಮ್ಮೆ ಈ ವರ್ತುಲದಲ್ಲಿ ಸಿಕ್ಕಿ ಹಾಕಿಕೊಂಡರೆ ಬಿಡಿಸಿಕೊಂಡು ಬರುವುದು ಅಸಾಧ್ಯವೆನ್ನುವುದು. ಆಕೆ ಪುನಃ ಅದೇ ವೃತ್ತಿಗಿಳಿಯುವುದು ಅನಿವಾರ್ಯವಾಗುತ್ತಿದೆ. ಅಂತಹ ಸನ್ನಿವೇಶ, ಒತ್ತಡಗಳು, ಅನಿವಾರ್ಯತೆಗಳು ಆಕೆಯ ಸುತ್ತ ನಿರ್ಮಾಣಗೊಳ್ಳುತ್ತವೆ.

ಕುಸುಮಾರವರು ಕೇವಲ ಲೈಂಗಿಕ ಕಾರ್ಯಕರ್ತೆಯರ ಸಮಸ್ಯೆಗಳನ್ನು ಗುರುತಿಸುವುದು ಮಾತ್ರವಲ್ಲದೆ, ನಂದ, ನಾಗರಾಜ್ ಜೊತೆಗೂಡಿ ಸಂಘಟನೆಗೆ ಪ್ರಯತ್ನಿಸಿರುವುದು, ಅವರಿಗೆ ನೆರವು ನೀಡಲು ಪ್ರಯತ್ನಿಸುವುದು, ಹೀಗೆ ಪರಿಚಯವಾದ ಹೆಣ್ಣುಮಕ್ಕಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವುದು, ಔಷಧಿಯನ್ನು ಒದಗಿಸಿಕೊಡುವುದು, ಕಾನೂನು ನೆರವು ನೀಡಲು ಓಡಾಡುವುದೇ ಮೊದಲಾದ ಕಾರ್ಯಗಳನ್ನು ಮಾಡಿದ್ದಾರೆ. ಇವು ಇವರಲ್ಲಿನ ಮಾನವೀಯ ಪ್ರಜ್ಞೆಗೆ ನಿದರ್ಶನವಾಗಿದೆ.

ವೇಶ್ಯೆಯರ ಬಳಿ ಹೋಗುವ ಪುರುಷರ, ತಲೆಹಿಡುಕರ, ವೇಶ್ಯಾವಾಟಿಕೆ ನಡೆಸುವರ ಸಂದರ್ಶನಗಳನ್ನು ನೀಡಲಾಗಿದೆ. ಪ್ರಗತಿಶೀಲ ಸಾಹಿತಿಯೊಬ್ಬರ ಗಂಡಸುತನದ ಅಹಂನ ಪ್ರಲಾಪ, ನೂರು ಜನ ವೇಶ್ಯೆಯರ ಸಂಪರ್ಕಮಾಡಲು ಪ್ರಯತ್ನಿಸಿದ ವೆಂಕಟೇಶ್, ಗಂಡಸರಿಗೆ ಶೀಲ ಯಾಕೆ ಎನ್ನುವ ರಾಮಣ್ಣರ ಮಾತುಗಳು ವೃತ್ತಿನಿರತ ಹೆಣ್ಣುಮಕ್ಕಳ ಬಗೆಗಿನ ಅವರ ಧೋರಣೆಯನ್ನು ಹೇಳುತ್ತವೆ. ಪ್ರತಿಯೊಬ್ಬ ವೇಶ್ಯೆಯೂ ಈ ವೃತ್ತಿಗಿಳಿಯಲು ಅವರದೇ ಕಾರಣವನ್ನು ನೀಡುತ್ತಾರೆ. ಒಮ್ಮೆ ನೀರಿಗಿಳಿದಾಯ್ತು.... ಎನ್ನುವ ಧೋರಣೆಯೇ ಎಲ್ಲರದೂ. ಮೆಚ್ಚಬೇಕಾದ ಒಂದು ಮುಖ್ಯ ಅಂಶವೆಂದರೆ, ಯಾವುದೇ ಸಂಘಟನೆಯ ನೆರವು-ಬೆಂಬಲವಿಲ್ಲದೆ, ವೈಯಕ್ತಿಕ ನೆಲೆಯಲ್ಲಿ, ಲೈಂಗಿಕ ಕಾರ್ಯಕರ್ತೆಯರನ್ನು ಸಂಘಟಿಸಲು ಪ್ರಯತ್ನಿಸಿರುವುದು. ಲೈಂಗಿಕ ಕಾರ್ಯಕರ್ತೆಯರೊಂದಿಗೆ ಸಂವಾದವನ್ನು ಏರ್ಪಡಿಸಿ ಅವರಲ್ಲಿದ್ದ ಭಯವನ್ನು ದೂರಮಾಡುವುದು, ಅವರ ಸಮಸ್ಯೆಯನ್ನು ಸಾರ್ವಜನಿಕರ ಗಮನಕ್ಕೆ ತರುವುದು, ಆರೋಗ್ಯದ ಸಮಸ್ಯೆ, ಪೊಲೀಸರ-ಮಧ್ಯವರ್ತಿಗಳ ಹಿಂಸೆ, ಪೊಲೀಸ್ ಠಾಣೆಯಲ್ಲಿರುತ್ತಿದ್ದ ಅವರ ಭಾವಚಿತ್ರವನ್ನು ತೆಗೆಸಿಹಾಕುವುದು ಮುಂತಾದವುಗಳಿಗೆ ಸಂಬಂಧಪಟ್ಟ ಬೇಡಿಕೆಗಳ ಬಗ್ಗೆ ಚರ್ಚಿಸಲಾಗಿದೆ. ಇವರ ಸ್ಥಿತಿಗತಿಯ ಬಗ್ಗೆ ಮಾಧ್ಯಮದವರ ಗಮನವನ್ನು ಸೆಳೆಯಲಾಗಿದೆ. ಈ ಸಂವಾದದಲ್ಲಿ ಅವರು ಮುಖ್ಯವಾಗಿ ಹೇಳುತ್ತಿರುವುದು "ನಮ್ಮನ್ನು ನಿಕೃಷ್ಟರನ್ನಾಗಿ ಮಾಡಬೇಡಿ, ನಮಗೂ ಸ್ಥಾನಮಾನ ನೀಡಿ" ಎಂದು.

ಇದು ಕುಸುಮಾರವರು 20 ವರ್ಷದ ಹಿಂದೆ ಮಾಡಿದ ಕೆಲಸದ, ಅನುಭವದ ದಾಖಲೆ. ಮೂಲಕೃತಿ ಕಳೆದು ಹೋಗಿದ್ದು, ಕೇವಲ ನೆನಪನ್ನು ಆಧರಿಸಿ ಈ ಕೃತಿಯನ್ನು ಬರೆದಿದ್ದಾರೆ. ಲೈಂಗಿಕ ಕಾರ್ಯಕರ್ತೆಯರ ಹಾಗೂ ಅವರ ಮಕ್ಕಳ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಅವರು ಹಾಕಿಕೊಂಡಿದ್ದರು. ಆದರೆ ಅವುಗಳನ್ನು ಅನಿವಾರ್ಯ ಕಾರಣದಿಂದ ಕೈ ಬಿಡಬೇಕಾಯ್ತು ಎನ್ನುತ್ತಾರೆ. 20 ವರ್ಷದ ಹಿಂದೆ ಲೈಂಗಿಕ ಕಾರ್ಯಕರ್ತೆಯರ ಜೀವನದ ಸ್ಥಿತಿ-ಗತಿಗಳಿಗೂ ಈ ವೃತ್ತಿಯನ್ನು ಅಂದು ನೋಡುತ್ತಿದ್ದ ದೃಷ್ಟಿಗೂ, ಇಂದಿಗೂ ಹಲವಾರು ವ್ಯತ್ಯಾಸಗಳನ್ನು ಕಾಣಬಹುದು. ಒಮ್ಮೆ ವೃತ್ತಿಗಿಳಿದವರು ಬೇರೆ ಉದ್ಯೋಗವನ್ನು ಮಾಡಲು ಬಯಸುವುದಿಲ್ಲ. ವೈಯಕ್ತಿಕ ನೆಲೆಯಲ್ಲಿ ಈ ಸಂಕೀರ್ಣ ಸಮಸ್ಯೆಗೆ ಪರಿಹಾರ ಹುಡುಕುವುದು ಸಾಧ್ಯವಿಲ್ಲ. ಇಂದು ದೇಶಾದ್ಯಂತ ಬಹಳಷ್ಟು ಸ್ವಯಂಸೇವಾ ಸಂಸ್ಥೆಗಳು ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿರುವುದರಿಂದ ಈ ಮಹಿಳೆಯರು ಸಂಘಟಿತರಾಗುತ್ತಿದ್ದಾರೆ. ಅವರ ಬೇಡಿಕೆಗಳಿಗಾಗಿ ಹೋರಾಡುತ್ತಿದ್ದಾರೆ. ಈ ವೃತ್ತಿಯೊಡನೆ ಹೆಣೆದುಕೊಂಡ ದೂಷಣೆಯ ಪರಿಭಾಷೆಯಲ್ಲಿ ಬದಲಾವಣೆಯಾಗಿದೆ. ಆದರೆ ಈ ಹೆಣ್ಣುಮಕ್ಕಳ ಬದುಕು ಅಂದಿಗೂ, ಇಂದಿಗೂ ಹೆಚ್ಚು ಬದಲಾವಣೆಯಾಗಿದೆಯೆನಿಸುವುದಿಲ್ಲ.

ವೃತ್ತಿನಿರತ ಹೆಣ್ಣುಮಕ್ಕಳ ದುರಂತ ಬದುಕಿನ ಒಳನೋಟಗಳನ್ನು ಒಳಗೊಂಡ ಈ ಕೃತಿ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಈ ಕೆಲಸವನ್ನು ಮಾಡುವ ಸಂದರ್ಭದಲ್ಲಿ ಕುಸುಮಾ ಅವರು ತೊಂದರೆಗೂ ಸಿಲುಕಿದ್ದಾರೆ. ಲೈಂಗಿಕ ಕಾರ್ಯಕರ್ತೆಯರ ಸಮಸ್ಯೆಗಳ ಬಗ್ಗೆ ಕಣ್ ತೆರೆಸುವಲ್ಲಿ ಈ ಕೃತಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಕುಸುಮಾ ಅವರ ಈ ಪ್ರಯತ್ನ ಮೆಚ್ಚಬೇಕಾದದ್ದು. ಅವರ ಈ ಪರಿಶ್ರಮವನ್ನು ಗುರುತಿಸಿದ ಬೆಂಗಳೂರಿನ 'ಶಾಶ್ವತಿ' ಸಂಸ್ಥೆಯು 'ಕಲ್ಪವಲ್ಲಿ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ❑

# ಲಿಂಗತ್ವ (ಜೆಂಡರ್) ಎಂದರೇನು?

ಇಂಗ್ಲಿಷ್ ಮೂಲ :
ಅಂಡರ್‌ಸ್ಟ್ಯಾಂಡಿಂಗ್ ಜೆಂಡರ್

ಲೇಖಕರು : ಕಮಲಾ ಭಾಸಿನ್
ಕನ್ನಡಕ್ಕೆ : ವೆಂ. ವನಜ

*(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)*

ಸಾರ್ವತ್ರಿಕ ಶಿಕ್ಷಣವನ್ನು ದೀರ್ಘಕಾಲದಿಂದ ಜಾರಿಗೊಳಿಸಿರುವ ಹಾಗೂ ಆಧುನಿಕ, ಉದ್ಯಮಶೀಲ ಮತ್ತು ಸಮತಾವಾದಿ ಸಮಾಜಗಳೆಂದು ಭಾವಿಸುವ ಯುನೈಟೆಡ್ ಕಿಂಗ್ಡಮ್ ಮತ್ತು ಅಮೆರಿಕದ ಸಂಯುಕ್ತ ಸಂಸ್ಥಾನದಂಥ ಸಮಾಜಗಳ ಒಂದು ಸ್ಥೂಲ ಪರಿಶೀಲನೆಯಿಂದ ಲಿಂಗತ್ವದ ಅಸಮಾನತೆಗಳು ಅಲ್ಲೂ ಇವೆಯೆಂದು ತಿಳಿದು ಬರುತ್ತದೆ. ಎರಡೂ ದೇಶಗಳಲ್ಲಿ ಮಾತೃಪ್ರಧಾನ ಕುಟುಂಬಗಳು ಅಪಾರ ಸಂಖ್ಯೆಯಲ್ಲಿವೆ. ಆದರೂ ಪುರುಷರನ್ನು ಕುಟುಂಬದ ಯಜಮಾನರೆಂದು ಇನ್ನೂ ಪರಿಗಣಿಸಲಾಗುತ್ತದೆ. ಈ ಸಮಾಜಗಳಲ್ಲಿ ಶೇಕಡಾ 50ಕ್ಕಿಂತ ಹೆಚ್ಚು ಮಹಿಳೆಯರು ತಮ್ಮ ಗಂಡಂದಿರಿಂದ ದೈಹಿಕ ಹಿಂಸೆಗೊಳಗಾಗುತ್ತಾರೆ. ಅತ್ಯಾಚಾರ ಮತ್ತು ದೈಹಿಕ ಹಿಂಸೆಗಳ ಪ್ರಕರಣಗಳ ಸಂಖ್ಯೆ ಹೆಚ್ಚಾಗಿದೆ. ಅಮೆರಿಕದಲ್ಲಿ ಸಮಾನ ವೇತನ ಕಾಯಿದೆ ಇನ್ನೂ ಜಾರಿಯಾಗಬೇಕಿದೆ. ಗರ್ಭಪಾತ ಒಂದು ಶಿಕ್ಷಾರ್ಹ ಅಪರಾಧ ಎಂದು ಹಲವುರಾಜ್ಯಗಳಲ್ಲಿ ತಿಳಿಯಲಾಗಿದೆ.



ಅಮೆರಿಕದಲ್ಲಿ ಆಗ ತಾನೇ ಕಾಲೇಜು ಶಿಕ್ಷಣ ಪಡೆದು ದುಡಿಯಲು ತೊಡಗುವ ಮಹಿಳೆ ತನ್ನೊಂದಿಗೆ ಶಿಕ್ಷಣ ಪಡೆದ ಪುರುಷರು ಪಡೆಯುವ ವೇತನದ ಶೇಕಡ 75ರಷ್ಟನ್ನು ಮಾತ್ರ ಪಡೆಯುತ್ತಾಳೆ. ವಯಸ್ಸಾದಂತೆ ಅವಳು (ಈ ವಿಷಯದಲ್ಲಿ) ಮತ್ತಷ್ಟು ಹಿಂದೆ ಸರಿದಿರುತ್ತಾಳೆಂದು ಅಮೆರಿಕದ ಜನಗಣತಿಯ ಕಚೇರಿಯ ಅಂಕಿ ಅಂಶಗಳು ಹೇಳುತ್ತವೆ. 1991ರಲ್ಲಿ ಬಿಡುಗಡೆಯಾದ ಅಸೋಸಿಯೇಟೆಡ್ ಪ್ರೆಸ್‌ನ ಜನಗಣತಿಯ ಅಂಕಿ ಅಂಶಗಳ ವಿಶ್ಲೇಷಣೆಯೊಂದರ ಪ್ರಕಾರ ಒಂದೇ ಪ್ರಮಾಣದ ಶಿಕ್ಷಣ ಪಡೆದಿದ್ದರೂ ಪ್ರತಿಯೊಂದು ಶೈಕ್ಷಣಿಕ ಹಂತದಲ್ಲೂ ಮಹಿಳೆಯರು ಪುರುಷರಿಗಿಂತ ಕಡಿಮೆ ಸಂಪಾದಿಸುತ್ತಾರೆಂದು ತಿಳಿದುಬರುತ್ತದೆ.

ಉದ್ಯಮೀಕರಣಗೊಂಡ ದೇಶಗಳಲ್ಲೆಲ್ಲಾ ಎಲ್ಲಾ ವೃತ್ತಿಗಳಲ್ಲಲ್ಲದಿದ್ದರೂ ಹೆಚ್ಚಿನವುಗಳಲ್ಲಿ ಲಿಂಗತ್ವದ ವ್ಯತ್ಯಾಸವು ಎದ್ದು ಕಾಣುವಂತಿರುವುದಕ್ಕೆ ಅಂಕಿ ಅಂಶಗಳನ್ನು ಆ್ಯನ್‌ಓಕ್ಲೆಯವರು ಒದಗಿಸುತ್ತಾರೆ. ಅದರಲ್ಲೂ ಗೃಹಿಣಿಯ ಒಂದು ವೃತ್ತಿ ಮಾತ್ರ ಸಂಪೂರ್ಣವಾಗಿ ಹೆಣ್ತನದ್ದಾಗಿದೆ. ಉದ್ಯಮದ ಒಳಗೆ ಲಿಂಗಭಿನ್ನತೆ/ವ್ಯತ್ಯಾಸವು ಅಪಾರವಾಗಿದೆಯೆಂದು ಅವರು ಹೇಳುತ್ತಾರೆ. ಹೆಚ್ಚಿನ ಮಹಿಳೆಯರು, ಅದರಲ್ಲೂ ದುಡಿಯುವ ಮಹಿಳೆಯಲ್ಲಿ ಮೂರನೆಯ ಒಂದು ಅಥವಾ ಎರಡು ಭಾಗದಷ್ಟು ಮಂದಿ ಬಟ್ಟೆ ಮತ್ತು ಉಡುಪು ತಯಾರಿಕೆ ಹಾಗೂ ಆಹಾರ ಸಂಸ್ಕರಣೆಯಲ್ಲಿ ಕೇಂದ್ರೀಕೃತಗೊಂಡಿದ್ದಾರೆ.

ಒಟ್ಟಿನಲ್ಲಿ ಪುರುಷರು ಪ್ರತಿಷ್ಠಿತ, ಹೆಚ್ಚು ಕೌಶಲದ ಮತ್ತು ಉತ್ತಮ ಆದಾಯ ತರುವ ಉದ್ಯೋಗಗಳಲ್ಲಿ ಹೆಚ್ಚಿನವನ್ನು ಪಡೆದುಕೊಂಡಿರುತ್ತಾರೆ. ಇದು ಉದ್ಯಮೀಕರಣಗೊಂಡ ವಿಶ್ವದುದ್ದಕ್ಕೂ ನಿಜವಾಗಿದೆ. 1966ರಲ್ಲಿ ಬ್ರಿಟನ್ನಿನ ದೊಡ್ಡ ಸಂಸ್ಥೆಗಳ ನಿರ್ವಹಣಾಧಿಕಾರಿಗಳ ಅಂಕಿಅಂಶಗಳ ಪಟ್ಟಿಯಲ್ಲಿ ಶೇಕಡ 87ರಷ್ಟು ಪುರುಷರಾಗಿದ್ದರೆ, ಶೇಕಡ 13ರಷ್ಟು ಮಹಿಳೆಯರಾಗಿದ್ದರು. ಅಮೆರಿಕದಲ್ಲಿ ಒಟ್ಟು ವಕೀಲರಲ್ಲಿ ಶೇಕಡ 3ರಷ್ಟು, ಗ್ರೇಟ್‌ಬ್ರಿಟನ್ನಿನಲ್ಲಿ ಶೇಕಡ 4ರಷ್ಟು ಮತ್ತು ಸ್ವೀಡನ್ನಿನಲ್ಲಿ ಶೇಕಡ 7ರಷ್ಟು ಮಂದಿ ಮಹಿಳೆಯರಾಗಿದ್ದಾರೆ. ಬ್ರಿಟನ್ನಿನಲ್ಲಿ ಒಟ್ಟು ಸಂಖ್ಯೆಯ ಇಂಜಿನಿಯರುಗಳಲ್ಲಿ ಕೇವಲ ಶೇ. 0.06ರಷ್ಟು ಮಂದಿ ಮಹಿಳೆಯರಾಗಿದ್ದಾರೆ. ಅಮೆರಿಕದಲ್ಲಿ ಇವರ ಸಂಖ್ಯೆ ಶೇಕಡ 0.07 ಮತ್ತು ಫ್ರಾನ್ಸಿನಲ್ಲಿ ಶೇಕಡ 3.7 ಆಗಿದೆ. ಈ ವೃತ್ತಿಗಳಲ್ಲಿ ಮಹಿಳೆಯರು ಪುರುಷರಿಗೆ ಸಮಾನವಾದ ವೇತನವನ್ನು ಪಡೆಯುತ್ತಾರೆ. ಆದರೆ ಇದೇ ವೇತನ ಇತರ ಉದ್ಯೋಗಗಳಲ್ಲಿ ಸಿಗುವುದಿಲ್ಲ. ಹೀಗೆ ಕೌಶಲ, ಪ್ರತಿಷ್ಠೆ, ಹಣಕಾಸಿನ ಲಾಭ ಮತ್ತು ಲಿಂಗತ್ವಗಳು ಪರಸ್ಪರ ಸಂಕೀರ್ಣ, ಆದರೆ ಸಮಂಜಸವಾದ ರೀತಿಯಲ್ಲಿ ಸಂಬಂಧಿಸಿವೆ. (ಆ್ಯನ್ ಓಕ್ಲೆ : ಸೆಕ್ಸ್, ಜೆಂಡರ್ ಅಂಡ್ ಸೊಸೈಟಿ : 1985)

ಉನ್ನತ ಶಿಕ್ಷಣದಲ್ಲಿ ಕೂಡ ಬೃಹತ್ ಪ್ರಮಾಣದ ವ್ಯತ್ಯಾಸಗಳು ಗಟ್ಟಿಯಾಗುಳಿದಿವೆ. ಆ್ಯನ್ ಓಕ್ಲೆ ಹೇಳುವಂತೆ "ಶಿಕ್ಷಣದ ಅತ್ಯುನ್ನತ ಹಂತಗಳಲ್ಲಿ ಈ ಅಂತರ ಎದ್ದು ಕಾಣುತ್ತದೆ. ಉನ್ನತ ಶಿಕ್ಷಣದಲ್ಲಿ 1965ರಲ್ಲಿ 20–24ರ ವಯೋಗುಂಪಿನ ಪ್ರತಿ ನೂರುಮಂದಿಗೆ ಬ್ರಿಟನ್ನಿನಲ್ಲಿ 6.6, ಡೆನ್ಮಾರ್ಕಿನಲ್ಲಿ 5.3, ಸ್ವಿಟ್ಜರ್‌ಲೆಂಡಿನಲ್ಲಿ 2.3 ಮತ್ತು ಬಲ್ಗೇರಿಯಾದಲ್ಲಿ 15.2 ಮಂದಿ ಮಹಿಳೆಯರಿದ್ದಾರೆ. 1967ರಲ್ಲಿ ಎರಡು ಭಾಗ ಮಹಿಳೆಯರಾಗಿದ್ದರು. ಅವರಲ್ಲಿ ಮೂರನೇ ಒಂದು ಭಾಗಕ್ಕಿಂತ ಕಡಿಮೆ ಮಂದಿ ಅಂತಿಮ ಪದವಿಗಳನ್ನು ಹಾಗೂ ಕೇವಲ ಒಂಬತ್ತನೇ ಒಂದು ಭಾಗ ಮಹಿಳೆಯರು ಎಲ್ಲಾ ಉನ್ನತ ಪದವಿಗಳನ್ನು ತೆಗೆದು ಕೊಳ್ಳುತ್ತಿದ್ದರು". ಈ ವಾಸ್ತವಾಂಶಗಳು ಹುಡುಗಿಗಿಂತ ಹುಡುಗನಿಗೆ ಶಿಕ್ಷಣ ಬಹಳಮುಖ್ಯ ಎನ್ನುವ ಪರಿಸ್ಥಿತಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳೆಂದು ಹೇಳಿಕೊಳ್ಳುವ ರಾಷ್ಟ್ರಗಳಲ್ಲೂ ಇರುವುದನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತವೆ. ಹುಡುಗರು ಮತ್ತು ಹುಡುಗಿಯರು ಅಧ್ಯಯನ ಮಾಡುವ ವಿಷಯಗಳು ಕೂಡ ಈ ಅಂತರವನ್ನು ಬಿಂಬಿಸುತ್ತವೆ. 1964ರಲ್ಲಿ ಶಿಕ್ಷಣದಲ್ಲಿ ಮಾಸ್ಟರ್ ಪದವಿಗಳನ್ನು ಶೇಕಡ 46 ಮಂದಿ, ಆದರೆ ವಿಜ್ಞಾನದಲ್ಲಿ ಕೇವಲ ಶೇಕಡ 10 ಮಂದಿ ಮಹಿಳೆಯರು ಅಮೆರಿಕದಲ್ಲಿ ಪಡೆದಿದ್ದರು. 1967ರಲ್ಲಿ ಬ್ರಿಟನ್ನಿನಲ್ಲಿ ವೈದ್ಯಕೀಯ, ದಂತವೈದ್ಯ ಮತ್ತು ಆರೋಗ್ಯವನ್ನು ಕುರಿತು ಅಧ್ಯಯನ ಮಾಡುವ ವಿದ್ಯಾರ್ಥಿಗಳ ಮೂರನೇ ಎರಡು ಭಾಗ ಪುರುಷರಾಗಿದ್ದರು. (ಆ್ಯನ್ ಓಕ್ಲೆ : ಪುಟ : 156)

*ಪುರುಷ ಪ್ರಧಾನತೆಯ ಸಂರಚನೆಗಳು ಮತ್ತು ಧೋರಣೆಗಳನ್ನು ಬದಲಿಸುವ ನಿಟ್ಟಿನಲ್ಲಿ ಯಾವುದೇ ಗಂಭೀರ ಪ್ರಯತ್ನಗಳು ಒಂದು ವೇಳೆ ನಡೆಯದಿದ್ದಲ್ಲಿ ಕೇವಲ ಶಿಕ್ಷಣ ಅಥವಾ ಅಭಿವೃದ್ಧಿಯಿಂದ ಮಾತ್ರ ಲಿಂಗತ್ವದ ಏಣಿಶ್ರೇಣಿಗಳನ್ನು ತೊಡೆದು ಹಾಕಲು ಸಾಧ್ಯವೇ ಇಲ್ಲವೆನ್ನುವುದನ್ನು ಉದ್ಯಮೀಕರಣಗೊಂಡ ಬಂಡವಾಳಶಾಹಿ ಅಥವಾ ಸಮಾಜವಾದೀ ದೇಶಗಳ ಈ ಅಂಕಿ ಅಂಶಗಳು ತೋರಿಸುತ್ತವೆ.*

*ಒಂದು ವೇಳೆ ಲಿಂಗತ್ವವು ಮಹಿಳೆಯರು ಮತ್ತು ಪುರುಷರ ಸ್ಥಾನಮಾನ ಮತ್ತು ಪಾತ್ರಗಳನ್ನು ನಿರ್ಧರಿಸುವುದಾದರೆ, ಅದು ಪುರುಷರು ಮತ್ತು ಮಹಿಳೆಯರ ನಡುವಿನ ಸಂಬಂಧಗಳನ್ನೂ ನಿರ್ಧರಿಸುವುದಿಲ್ಲವೆ?*

ನಿಜವಾಗಿಯೂ ಅದು ನಿರ್ಧರಿಸುತ್ತದೆ. ಒಂದು ವೇಳೆ ನೀವು ಚಿನ್ನ ಮತ್ತು ಬೆಳ್ಳಿಗೆ ಬೇರೆ ಬೇರೆ ಬೆಲೆಗಳನ್ನು ಕಟ್ಟಿದರೆ, ಸಹಜವಾಗಿಯೇ ನೀವು ಅವೆರಡರ ನಡುವಿನ ಸಂಬಂಧವನ್ನು ನಿರ್ಧರಿಸಿರುತ್ತೀರಿ. ಅದೇ ರೀತಿ ಪುರುಷರು ಮತ್ತು ಮಹಿಳೆಯರ ನಡುವಿನ ಸಂಬಂಧಗಳನ್ನು ಸಮಾಜವು ನಿರ್ಧರಿಸುತ್ತದೆ. ಲಿಂಗತ್ವಾಧರಿತ ಸಂಬಂಧಗಳನ್ನು ಲಿಂಗತ್ವ ಸಂಬಂಧಗಳು ಎನ್ನುತ್ತೇವೆ.

*"ಲಿಂಗತ್ವ ಸಂಬಂಧಗಳು ಎನ್ನುವ ಶಬ್ದವು ಪುರುಷರು ಮತ್ತು ಮಹಿಳೆಯರ ನಡುವಿನ ಅಧಿಕಾರದ ಸಂಬಂಧಗಳಿಗೆ ಸಂಬಂಧಿಸಿದೆ. ಲಿಂಗತ್ವ ಸಂಬಂಧಗಳು ಆಚರಣೆಗಳು, ವಿಚಾರಗಳು, ಪ್ರಾತಿನಿಧ್ಯಗಳ ಪರಿಧಿಯಲ್ಲಿ ಪ್ರಕಟಗೊಳ್ಳುತ್ತವೆ. ಅವುಗಳಲ್ಲಿ ಮಹಿಳೆಯರು ಮತ್ತು ಪುರುಷರ ನಡುವಿನ ಶ್ರಮವಿಭಜನೆ, ಪಾತ್ರಗಳು ಮತ್ತು ಸಂಪನ್ಮೂಲಗಳು ಮಾತ್ರವಲ್ಲ, ಅವರಿಗೆ ಆರೋಪಿಸುವ ವಿವಿಧ ಸಾಮರ್ಥ್ಯಗಳು, ಧೋರಣೆಗಳು, ಆಸೆ-ಆಕಾಂಕ್ಷೆಗಳು, ವ್ಯಕ್ತಿತ್ವ-ವೈಶಿಷ್ಟ್ಯಗಳು, ವರ್ತನಾ ಮಾದರಿಗಳು ಮುಂತಾದವು ಸೇರಿಕೊಳ್ಳುತ್ತವೆ. ಲಿಂಗತ್ವ ಸಂಬಂಧಗಳು ಸಾಮಾಜಿಕ ಏಣಿಶ್ರೇಣಿಯ ಇತರ ಸಂರಚನೆಗಳಾದ ವರ್ಗ, ಜಾತಿ ಮತ್ತು ಜನಾಂಗಗಳೊಂದಿಗಿನ ಪರಸ್ಪರ ಕ್ರಿಯೆಗಳಲ್ಲಿ ಈ ಆಚರಣೆಗಳು ಮತ್ತು ಸಿದ್ಧಾಂತಗಳಿಂದ ರಚಿತವಾಗುತ್ತವೆ. ಹಾಗೂ ಅವುಗಳ ರಚನೆಯಲ್ಲಿ ನೆರವಾಗುತ್ತವೆ. ಇವು (ಜೈವಿಕವಾಗಿ ನಿರ್ಧರಿತವಾದವು ಎನ್ನುವುದಕ್ಕಿಂತ) ಹೆಚ್ಚಾಗಿ ಸಾಮಾಜಿಕವಾಗಿ ರಚಿತವಾದವು ಹಾಗೂ ಕಾಲಕಾಲಕ್ಕೆ ಮತ್ತು ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿರುತ್ತವೆಂದು ಅರ್ಥಮಾಡಿಕೊಳ್ಳಬೇಕು (ಅಗರ್‌ವಾಲ್, ಬೀನಾ : ಎ ಫೀಲ್ಡ್ ಆಫ್ ವನ್ಸ್ ಓನ್ : ಜೆಂಡರ್ ಅಂಡ್ ಲ್ಯಾಂಡ್‌ರೈಟ್ಸ್ ಇನ್ ಸೌತ್ ಏಷ್ಯಾ : 1996 : ಪು : 51)*

ಲಿಂಗತ್ವದ ಹಾಗೆ ಲಿಂಗತ್ವ ಸಂಬಂಧಗಳು ಪ್ರತಿಯೊಂದು ಸಮಾಜದಲ್ಲೂ ಒಂದೇ ಆಗಿರುವುದಿಲ್ಲ. ಅಥವಾ ಚಾರಿತ್ರಿಕವಾಗಿ ಸ್ಥಿರವಾಗಿರುವುದಿಲ್ಲ. ಅವು ಚಲನಶೀಲವಾಗಿರುತ್ತವೆ ; ಕಾಲಕಾಲಕ್ಕೆ ಬದಲಾಗುತ್ತವೆ. ಏನೇ ಆದರೂ, ಹೆಚ್ಚಿನ ಸಮಾಜಗಳಲ್ಲಿ ಲಿಂಗತ್ವ ಸಂಬಂಧಗಳು ನ್ಯಾಯಸಮ್ಮತವಾಗಿರುವುದಿಲ್ಲ.

ಕುಟುಂಬಗಳಲ್ಲಿ ಮಹಿಳೆಯರು ಮತ್ತು ಪುರುಷರ ನಡುವಿನ ಸಂಬಂಧಗಳಲ್ಲಿ ಸಾಮರಸ್ಯವಿರುತ್ತದೆ, ಘರ್ಷಣೆಗಳಿರುವುದಿಲ್ಲವೆನ್ನುವ ನಂಬಿಕೆಗೆ ಈ ತಿಳಿವಳಿಕೆ ಸವಾಲನ್ನೊಡ್ಡುತ್ತದೆ. ವಾಸ್ತವದಲ್ಲಿ ಅಲ್ಲಿ ಸಹಕಾರ ಮತ್ತು ಘರ್ಷಣೆಗಳು, ಸಮರಸ ಮತ್ತು ವಿರಸಗಳಿರುತ್ತವೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಲಿಂಗತ್ವ ಸಂಬಂಧಗಳಲ್ಲಿ ರಾಜಕೀಯ ಇದೆ. ಇಲ್ಲಿ "ರಾಜಕೀಯ" ಶಬ್ದವು ಯಾವುದೇ ಸಂಬಂಧದಲ್ಲಿರುವ ಅಧಿಕಾರದ ಆಟಕ್ಕೆ ಸಂಬಂಧಿಸಿದೆ. ಏಕೆಂದರೆ, ಜನರಿಗೆ (ಇತರರು ಸಂಪನ್ಮೂಲಗಳು, ನಿರ್ಧಾರ ತೆಗೆದುಕೊಳ್ಳುವ ವಿಷಯಗಳಲ್ಲಿ) ಬೇರೆ ಬೇರೆ ಪ್ರಮಾಣದಲ್ಲಿ ಅಧಿಕಾರ, ಹಕ್ಕು ಮತ್ತು ನಿಯಂತ್ರಣಗಳನ್ನು ವಹಿಸಲಾಗುತ್ತದೆ. ಜಾತಿ, ವರ್ಗ ಮತ್ತು ಜನಾಂಗಗಳ ನಡುವೆ ಮಾಡಿದಂತೆಯೇ ಕುಟುಂಬ, ದುಡಿಮೆಯ ಸ್ಥಳ ಮತ್ತು ಸಮಾಜಗಳಲ್ಲಿ ಗಂಡು-ಹೆಣ್ಣುಗಳ ನಡುವೆ ಸೂಕ್ಷ್ಮವಾದ ಅಥವಾ ಎದ್ದು ಕಾಣುವ ಅಧಿಕಾರದ ಆಟಗಳು ಅಥವಾ ರಾಜಕೀಯ ನಡೆಯುತ್ತಿರುತ್ತದೆ.

ಸೈದ್ಧಾಂತಿಕವಾಗಿ ಲಿಂಗತ್ವದ ಏಣಿಶ್ರೇಣಿ ಎಂದರೆ ಯಾವುದೇ ಒಂದು ಲಿಂಗದ ಆಳ್ವಿಕೆ ಎಂದಾಗುತ್ತದೆ. ಆದರೆ ಆಚರಣೆಯಲ್ಲಿ ಯಾವಾಗಲೂ ಪುರುಷರು ಆಳುವ, ಮಹಿಳೆಯರು ಆಳ್ವಿಕೆಗೊಳಪಡುವ ಏಣಿಶ್ರೇಣಿ ಎಂದಾಗಿರುತ್ತದೆ. ಬೇರೆ ಬೇರೆ ಸಂಸ್ಕೃತಿಗಳಲ್ಲಿ ಮತ್ತು ಇತ್ತೀಚಿನ ಇತಿಹಾಸದುದ್ದಕ್ಕೂ ಕಾಣುವ ಲಿಂಗತ್ವ ಸಂಬಂಧಗಳ ಒಂದು ಸಾಮಾನ್ಯ ಅಂಶವೆಂದರೆ, ಪುರುಷರಿಗೆ ಮಹಿಳೆಯರು ಅಧೀನರಾಗಿರುವುದು. ಆದ್ದರಿಂದ ಲಿಂಗತ್ವದ ಸಂಬಂಧಗಳೆಂದರೆ, **ಆಳ್ವಿಕೆ ಮತ್ತು ಅಧೀನತೆಯ ಸಂಬಂಧಗಳಾಗಿವೆ**. ಇವುಗಳನ್ನು ಸಹಕಾರ, ಒತ್ತಾಯ ಮತ್ತು ಹಿಂಸೆಗಳು ಪೋಷಿಸುತ್ತವೆ. ಇದಕ್ಕೆ ಕಾರಣ, ಹೆಚ್ಚಿನ ಸಮಾಜಗಳು ಪುರುಷ ಪ್ರಧಾನವಾಗಿವೆ ಅಥವ ಪುರುಷರ ಆಳ್ವಿಕೆಗೊಳಪಟ್ಟಿವೆ. ಇದನ್ನು ಹೀಗೂ ಹೇಳಬಹುದು ; ಹೆಚ್ಚಿನ ಸಮಾಜಗಳಲ್ಲಿ ಲಿಂಗತ್ವ ಸಂಬಂಧಗಳು ಸ್ವಭಾವತಃ ಪುರುಷಪ್ರಧಾನವಾಗಿವೆ. ಅವು ಪುರುಷಪ್ರಧಾನತೆಯ ನಿಯಮಗಳನ್ನು ಪಾಲಿಸುತ್ತವೆ. ಪುರುಷ ಪ್ರಧಾನತೆಯು ಒಂದು ಚಿಂತನಾಕ್ರಮ ಮತ್ತು ಸಾಮಾಜಿಕ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ಪುರುಷರು ಮಹಿಳೆಯರಿಗಿಂತ ಶ್ರೇಷ್ಠರೆಂದು ಪರಿಗಣಿಸಲಾಗುತ್ತದೆ. ಅವರು ಆಳುವವರಾಗಿರುತ್ತಾರೆ ಹಾಗೂ ಹೆಚ್ಚಿನ ಸಂಪನ್ಮೂಲಗಳನ್ನು ಮತ್ತು ಸಾಮಾಜಿಕ ಸಂಸ್ಥೆಗಳನ್ನು ನಿಯಂತ್ರಿಸುತ್ತಾರೆ.

ಲಿಂಗತ್ವವು ಕೇವಲ ಪುರುಷರು ಮತ್ತು ಮಹಿಳೆಯರ ನಡುವಿನ ಸಂಬಂಧಗಳನ್ನು ಮಾತ್ರ ನಿರ್ಧರಿಸುವುದಿಲ್ಲ. ಅದು ಪುರುಷ-ಪುರುಷರ ನಡುವಿನ ಮತ್ತು ಮಹಿಳೆ-ಮಹಿಳೆಯರ ನಡುವಿನ ಸಂಬಂಧಗಳ ಮೇಲೂ ತನ್ನ ಪ್ರಭಾವವನ್ನು ಬೀರಬಹುದು. ಲಿಂಗತ್ವದ ಏಣಿಶ್ರೇಣಿಗಳು ಅಸಮಾನವಾಗಿರುವ ದಕ್ಷಿಣ ಏಷ್ಯಾದಲ್ಲಿ ಲಿಂಗತ್ವವು ಒಂದು ಶಕ್ತಿಯುತವಾದ ಸಂಘಟನಾ ಅಂಶವಾಗಿದೆ. ಉದಾಹರಣೆಗೆ, ಉತ್ತರ ಭಾರತದಲ್ಲಿ ವರನ ತಂದೆ ಮತ್ತು ವಧುವಿನ ತಂದೆಯರ ನಡುವಿನ ಸಾಮಾಜಿಕ ಸಂಬಂಧಗಳ ಚಿತ್ರಣವಾಗಿವೆ. ವರನ ತಂದೆಯನ್ನು ಸಾಮಾನ್ಯವಾಗಿ ಶ್ರೇಷ್ಠವೆಂದು ಹಾಗೂ ಹೆಚ್ಚು ಗೌರವಾನ್ವಿತನೆಂದು ಪರಿಗಣಿಸಲಾಗುತ್ತದೆ. ವಧುವಿನ ತಂದೆ ಒಬ್ಬ ಹುಡುಗಿಯ ತಂದೆ ಎಂಬ ಕಾರಣದಿಂದಾಗಿಯೇ ಯಾವಾಗಲೂ ಕೆಳಗಿನ ಮತ್ತು ಬಳಕೆಗೆ ಬರುವ (subservient) ಸ್ಥಾನವನ್ನು ಪಡೆದಿರುತ್ತಾನೆ.

ಲಿಂಗತ್ವವು ಹೆಚ್ಚು ಸಂದರ್ಭಗಳಲ್ಲಿ ಇಬ್ಬರು ಮಹಿಳೆಯರ ನಡುವಿನ ಸಂಬಂಧಗಳನ್ನು ನಿರ್ಧರಿಸುತ್ತದೆನ್ನಲು ಅತ್ತೆ-ಸೊಸೆ (ಸಾಸ್-ಬಹು), ನಾದಿನಿ-ಅತ್ತಿಗೆ (ಸೋದರನ ಹೆಂಡತಿ) ಅಥವಾ ಗಂಡನ ಸೋದರಿ (ನನದ್) ಅಥವಾ ಇಬ್ಬರು ಅತ್ತೆಯರ ನಡುವಿನ ಸಂಬಂಧಗಳನ್ನು ಉದಾಹರಿಸಬಹುದು. ಇಲ್ಲಿ ವರನಿಗೆ ಸಂಬಂಧಿಸಿದ ಮಹಿಳೆಯರು ತನ್ನಿಂದ ತಾವೇ ವಧುವಿಗೆ ಸಂಬಂಧಿಸಿದ ಮಹಿಳೆಯರಿಗಿಂತ ಶ್ರೇಷ್ಠವಾದ ಸ್ಥಾನವನ್ನು ಪಡೆದುಕೊಂಡುಬಿಡುತ್ತಾರೆ.

**ಥಾಮಸ್ ವೊನ್ ಆಕ್ವಿನಸ್ ಎಂಬ ಬುದ್ಧಿವಂತ ಮತ್ತು ಧರ್ಮಭೀರುವಾದ ಧಾರ್ಮಿಕ ಮುಖಂಡನೊಬ್ಬ ಮುನ್ನೂರು ವರ್ಷಗಳ ಹಿಂದೆ ಜರ್ಮನಿಯಲ್ಲಿದ್ದ. ಅವನು ಮಹಿಳೆಯರು ಕಳೆಯಿದ್ದಂತೆ. ಅವರು**

ಬಹಳ ಬೇಗ ಬೆಳೆದುಬಿಡುತ್ತಾರೆ. ಕಾರಣ ಅವರು ಯಾವ ಕೆಲಸಕ್ಕೂ ಬಾರದವರು. (ಪುರುಷರು ಇಂದಿನ ಜಗತ್ತಿನಲ್ಲಿ ಪ್ರಮುಖ ಬೆಳೆ, ವಾಣಿಜ್ಯ ಬೆಳೆಯಿದ್ದಂತೆ!)

**ಮಹಿಳೆಯರು ಪುರುಷರಿಗೆ ಸಮಾನರಾಗಲು ಅವರ ಎರಡು ಪಟ್ಟು ಒಳ್ಳೆಯವರಾಗಬೇಕು........ ಅದೃಷ್ಟವಶಾತ್ ಅದೇನೂ ಕಷ್ಟವಲ್ಲ..........**

**ಕುಟುಂಬದಲ್ಲಿ ರಾಜಕೀಯ ಮತ್ತು ಪದೇ ಪದೇ ಪ್ರಸ್ತಾಪಿಸುತ್ತಿರುವ ಮಹಿಳೆಯರ ಚೌಕಾಶಿ ಮಾಡುವ ಶಕ್ತಿಯನ್ನು ನೀವು ಹೇಗೆ ಅರ್ಥೈಸುತ್ತೀರಿ?**

ಕುಟುಂಬದ ಸದಸ್ಯರೆಲ್ಲರೂ ಒಂದೇ ರೀತಿಯ ಸಂಪನ್ಮೂಲಗಳು, ಸೇವೆ ಮತ್ತು ಅವಕಾಶಗಳನ್ನು ಹೊಂದಿರುವುದಿಲ್ಲ ಎನ್ನುವುದನ್ನು ನಾವೀಗಾಗಲೇ ತಿಳಿದುಕೊಂಡಿದ್ದೇವೆ. ಈ ಅಸಮಾನತೆಗಳನ್ನಾಧರಿಸಿ ಹಲವು ಸಮಾಜವಿಜ್ಞಾನಿಗಳು ಅಧಿಕಾರವು ಪ್ರಸ್ತಾವನೆಯಾಗುವ ಕುಟುಂಬವನ್ನು ಚೌಕಾಸಿ ಮಾಡುವ ಮತ್ತು ಸ್ಪರ್ಧಿಸುವ ಸ್ಥಳವೆಂದು ಭಾವಿಸುತ್ತಾರೆ. ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಅಮರ್ತ್ಯಸೇನರು ಇದನ್ನು ಒಂದು ಸಹಕಾರ ಮತ್ತು ಘರ್ಷಣೆಯ ಮಾದರಿ ಎಂದು ಕರೆಯುತ್ತಾರೆ. ಸ್ತ್ರೀವಾದಿ ಅರ್ಥಶಾಸ್ತ್ರಜ್ಞರಾದ ಬೀನಾ ಅಗರವಾಲರು ಈ ಪರಿಕಲ್ಪನೆಯನ್ನು ಮತ್ತಷ್ಟು ವಿಸ್ತರಿಸಿದ್ದಾರೆ. ಇವರ ಪ್ರಕಾರ, ಮನೆ/ಕುಟುಂಬ ವೆಂದರೆ ಸಂಬಂಧಗಳ ಒಂದು ಸಂಕೀರ್ಣ ಮಾತೃಕೆ / ಅಚ್ಚು. ಇಲ್ಲಿ ಲಿಂಗತ್ವ ವಯಸ್ಸು, ಸಂಬಂಧದ ವಿಧ ಮತ್ತು "ಅವಿವಾದಿತ ಸಂಪ್ರದಾಯಗಳು" ನಿರ್ಬಂಧಗಳಿಗೊಳಪಟ್ಟು ಪ್ರಸ್ತಾವನೆ ನಡೆಯುತ್ತಲೇ ಇರುತ್ತದೆ. ಕುಟುಂಬ ಮತ್ತು ಸಮುದಾಯಗಳಲ್ಲಿನ ಲಿಂಗತ್ವದ ಪರಸ್ಪರ ಕ್ರಿಯೆಗಳು, ಮಾರುಕಟ್ಟೆ ಮತ್ತು ರಾಜ್ಯಾಧಿಕಾರಗಳು ಸಹಕಾರ ಮತ್ತು ಘರ್ಷಣೆಯ ಮೂಲಾಂಶಗಳನ್ನು ಹೊಂದಿರುತ್ತವೆ. ಅಸಹಕಾರಕ್ಕಿಂತ ಸಹಕಾರದಿಂದ ತಮಗೆ ಒಳ್ಳೆಯ ದಾಗುತ್ತದೆಂದಾಗ ಎರಡೂ ಪಕ್ಷಗಳು ಸಹಕಾರ ನೀಡಲು ಒಪ್ಪಿಕೊಳ್ಳುತ್ತವೆ.

ಬೀನಾ ಅಗರವಾಲರ ಪ್ರಕಾರ, ಗ್ರಾಮೀಣ ವ್ಯಕ್ತಿಯೊಬ್ಬನ/ಳ ಚೌಕಾಶಿ ಮಾಡುವ ಅಧಿಕಾರ/ ಶಕ್ತಿಯು ಅವನ/ಳ ಹಿನ್ನೆಲೆಯನ್ನು ಅದರಲ್ಲೂ ಈ ಕೆಳಕಂಡ ಐದು ಅಂಶಗಳನ್ನು ಅವಲಂಬಿಸುತ್ತದೆ. ಅವೆಂದರೆ :

- ಆಸ್ತಿಗಳ ಮೇಲೆ, ಅದರಲ್ಲೂ ವಿಶೇಷವಾಗಿ ಉಳುವ ಭೂಮಿಯ ಮೇಲಿನ ಖಾಸಗಿ ಒಡೆತನ ಮತ್ತು ಅವುಗಳ ಮೇಲಿನ ನಿಯಂತ್ರಣ.
- ಉದ್ಯೋಗ ಮತ್ತಿತರೆ ಆದಾಯ ತರುವ ಸಾಧನಗಳ ಲಭ್ಯತೆ
- ಸಾಮುದಾಯಿಕ (Communal) ಸಂಪನ್ಮೂಲಗಳಾದ ಸ್ಥಳೀಯ/ ಗ್ರಾಮಸಭೆ/ಪಂಚಾಯಿತಿಗಳು ಮತ್ತು ಅರಣ್ಯ ಪ್ರದೇಶಗಳಿಗೆ ಪ್ರವೇಶಾಧಿಕಾರ
- ಸಾಂಪ್ರದಾಯಿಕ, ಬಾಹ್ಯ ಮತ್ತು ಸಾಮಾಜಿಕವಾದ ಬೆಂಬಲ ವ್ಯವಸ್ಥೆಯ ಲಭ್ಯತೆ
- ರಾಜ್ಯಾಧಿಕಾರ ಅಥವಾ ಸ್ವಯಂ ಸೇವಾ ಸಂಸ್ಥೆಗಳ ಬೆಂಬಲದ ಲಭ್ಯತೆ.

"ಈ ಐದು ಅಂಶಗಳು ಒಬ್ಬ ವ್ಯಕ್ತಿ ತನ್ನ ಕುಟುಂಬದ ಹೊರಗೆ ತನ್ನ ಬದುಕಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಸಾಮರ್ಥ್ಯದೊಂದಿಗೆ ನೇರವಾಗಿ ಘರ್ಷಣೆಗಿಳಿಯುತ್ತವೆ. ಇಲ್ಲಿಯ ಪೂರ್ವನಂಬಿಕೆಯೆಂದರೆ ಕುಟುಂಬದ ಹೊರಗೆ ದೈಹಿಕವಾಗಿ ಬದುಕುಳಿಯುವ ಸಾಮರ್ಥ್ಯ ಒಬ್ಬ ವ್ಯಕ್ತಿಯಲ್ಲಿ ಹೆಚ್ಚಿದಷ್ಟೂ (ಕನಿಷ್ಠ ತನ್ನ ಉಳಿವಿಗಾಗಿ ಸಂಪನ್ಮೂಲ ಹಂಚಿಕೆಗೆ ಸಂಬಂಧಿಸಿದಂತೆ) ಕುಟುಂಬದಲ್ಲಿ ಅವನ/ಳ ಚೌಕಾಶಿಯ ಅಧಿಕಾರ/ಶಕ್ತಿ ಹೆಚ್ಚಾಗುತ್ತದೆ. ಈ ಅಂಶಗಳಿಗೆ ಸಂಬಂಧಿಸಿದಂತೆ ಕುಟುಂಬದ ಸದಸ್ಯರ ನಡುವಿನ ಅಸಮಾನತೆಗಳಿಂದಾಗಿ ಕೆಲವು ಸದಸ್ಯರ ಚೌಕಾಶಿಯ ಅಧಿಕಾರ/ಶಕ್ತಿ ತಮಗೆ ಹೋಲಿಸಿದಾಗ ದುರ್ಬಲ ವಾಗಿರುತ್ತದೆ. ಲಿಂಗತ್ವವು ಅಸಮಾನತೆಯ ಅಂಥ ಒಂದು ಆಧಾರವಾದರೆ, ವಯಸ್ಸು ಇನ್ನೊಂದು." (ಬೀನಾ ಅಗರವಾಲ್, ಪುಟ 62–63)

ಇದಕ್ಕೆ ಒಂದು ಉದಾಹರಣೆಯೆಂದರೆ, ಮಹಿಳೆಯರು ಸಂಪಾದಿಸುವ ಸಾಮರ್ಥ್ಯ ಪಡೆದರೆಂದರೆ, ಅದರಲ್ಲೂ ಅವರ ಆದಾಯ ಕುಟುಂಬದ ಆಧಾರವಾಗಿದ್ದಾಗ ಅವರ ಚೌಕಾಶಿ ಮಾಡುವ ಸ್ಥಾನ ಕುಟುಂಬದ ಇತರ ಸದಸ್ಯರಿಗಿಂತ ಹೆಚ್ಚು ಶಕ್ತಿಯುತ ವಾಗಿರುತ್ತದೆ. ಅದೇ ರೀತಿ ಭೂಮಿ, ಹಣ, ಅಥವಾ ಇತರೆ ಆಸ್ತಿಗಳಂಥ ಸಂಪನ್ಮೂಲಗಳನ್ನು ಹೊಂದಿರು ವುದು ಅಥವಾ ಅವುಗಳ ಮೇಲಿನ ನಿಯಂತ್ರಣವು ಅವರ ಪರಾವಲಂಬನೆಯ ಸ್ಥಾನ ಕಡಿಮೆ ಮಾಡುತ್ತದಲ್ಲದೆ ಕುಟುಂಬದಲ್ಲಿ ಹೆಚ್ಚಿನ ಸ್ಥಾನವನ್ನು ಕೇಳುವ ಸಾಮರ್ಥ್ಯವನ್ನು ನೀಡುತ್ತದೆ.

***ಧರ್ಮ, ಜಾತಿ ಮತ್ತು ವರ್ಗಗಳಂಥ ನಮ್ಮ ಗುರುತುಗಳು ಲಿಂಗತ್ವ ಮತ್ತು ಲಿಂಗತ್ವದ ಸಂಬಂಧಗಳ ಮೇಲೆ ಹೇಗೆ ಪರಿಣಾಮ ಬೀರುತ್ತವೆ?***

ನಾವೆಲ್ಲರೂ ಹಲವು ರೀತಿಯ ಗುರುತುಗಳನ್ನು ಹೊಂದಿದ್ದೇವೆ. ಉದಾಹರಣೆಗೆ, ಒಬ್ಬ ವ್ಯಕ್ತಿ ಹೆಣ್ಣಾಗಿರುವುದರಿಂದ ಜೊತೆಗೆ ಹಿಂದೂ, ಮಧ್ಯಮ ವರ್ಗದ ಮೇಲು ಅಥವಾ ಕೆಳಜಾತಿಯ, ವಿವಾಹಿತ ಮುಂತಾದವುಗಳಾಗಿರುತ್ತಾಳೆ. ಲಿಂಗತ್ವವು ಇತರ ಗುರುತುಗಳೊಂದಿಗೆ ಪ್ರತಿಕ್ರಿಯಿಸುತ್ತದೆ. ಅದು ಸಾಮಾಜಿಕ ಮತ್ತು ಆರ್ಥಿಕ ಅಂಶಗಳಲ್ಲದೆ ಭಾಷೆ, ಜನಾಂಗ, ವಯಸ್ಸು ಮತ್ತು ವೈವಾಹಿಕ ಸ್ಥಾನಮಾನಗಳ ಮೇಲೆ ಪ್ರಭಾವ ಬೀರುತ್ತದೆ. ಹಾಗೂ ಇವುಗಳಿಂದ ಪ್ರಭಾವಿತಗೊಳ್ಳುತ್ತದೆ. ಸಮಾಜದಲ್ಲಿ ಎಲ್ಲಾ ಮಹಿಳೆಯರು ಎಲ್ಲಾ ಪುರುಷರಿಗೆ ಅಧೀನರಾಗಿಲ್ಲ. ಉದಾಹರಣೆಗೆ, ಶ್ರೀಮಂತ ಮಹಿಳೆಯೊಬ್ಬಳು ತನ್ನ ವರ್ಗಸಂಬಂಧದಿಂದಾಗಿ ತನ್ನ ಮನೆಯ ಸಹಾಯಕರಾಗಿ ಕೆಲಸ ಮಾಡುವ ಪುರುಷರನ್ನು ಆಳುವ ಸ್ಥಾನದಲ್ಲಿರುತ್ತಾಳೆ. ಇಲ್ಲಿ ಮಹಿಳೆಯ ಲಿಂಗತ್ವಕ್ಕಿಂತ ಅವಳ ವರ್ಗವೇ ಹೆಚ್ಚು ಮುಖ್ಯವಾಗುತ್ತದೆ. ಇತರ ಸಂದರ್ಭಗಳಲ್ಲಿ ಕೆಳ ಜಾತಿ/ವರ್ಗದ ಮಹಿಳೆಯೊಬ್ಬಳು ಮೇಲ್ಜಾತಿ / ವರ್ಗದ ಪುರುಷನಿಂದ ದುಪ್ಪಟ್ಟು ಶೋಷಣೆಗೊಳಗಾಗುತ್ತಾಳೆ. ಭಾರತದ ಕೆಲವು ಸಮುದಾಯಗಳಲ್ಲಿ ಕೆಳಜಾತಿಯ ವಧು ತಾನು ವಿವಾಹಿತಳಾಗಿ ಮೊದಲ ರಾತ್ರಿಯನ್ನು ಮೇಲ್ವರ್ಗದ ಜಮೀನ್ದಾರನೊಂದಿಗೆ ಕಳೆಯಬೇಕಾಗುವುದು ಇದಕ್ಕೆ ಉದಾಹರಣೆಯಾಗುತ್ತದೆ.

(ಮುಂದುವರೆಯುವುದು)

# ಬಿತ್ತಾಕಿಗೇ ಗೊತ್ತು ಬೀಜದ ಗುಟ್ಟು

ಸೌಜನ್ಯ : 'ಸಹಜ ಸಾಗುವಳಿ' ದ್ವೈಮಾಸಿಕೆ

(ಹಿಂದಿನ ಸಂಚಿಕೆಯಿಂದ)



## ಮಕ್ಕಳ ಹಾಗೇ ಹೊಲ–ನಮ್ಮ ಸಂಬಂಧ

ಇಬ್ಬರೂ ಹೊಲದಲ್ಲಿ ಎಲ್ಲ ಕೆಲಸ ಮಾಡುತ್ತಿರುತ್ತೀವಿ. ಒಮ್ಮೊಮ್ಮೆ ಗಂಡಸು ಮಕ್ಕಳು ಜಾಸ್ತಿ ಹೋಗ್ತಿರ್ತಾರೆ. ಅವರು ಇಂಥಿಂಥ ರೋಗ ಬಿದ್ದೈತಿ, ಇಂಥ ಎಣ್ಣೆ ಹೊಡೀಬೇಕು ಅಂತ ಅವರೆ ತೀರ್ಮಾನ ಮಾಡ್ತಾರೆ. ಒಮ್ಮೊಮ್ಮೆ ಗಿಡ ಹರಕೊಂಡು ಬಂದು ಕಟ್ಟೆಮ್ಯಾಗ ಕುಂತು ನಾಕುಮಂದಿ ಮಾತನಾಡತಾ ಇರತಾರ. ನಾವು ಹೊಲದಾಗ ಇದ್ದಾಗ ನಮ್ಮ ಕಣ್ಣಿಗೆ ಹುಳ ಪಳ ಬಿದ್ದಾಗ ನಾವೇ ಬಂದು ಹೇಳ್ತೀವಿ. 'ಹಿಂಗ ಹುಳ ಐತ್ರಿ, ಈ ಥರ ಹೊಲ ಎಲ್ಲ ಸಪ್ಪೆ ಕಾಣಸ್ತೈತಿ, ಯಾಕೋ ಕೆಂಪಾಗೈತಿ, ಹಳದಿ ಆಗೈತಿ' ಅಂತ. ಅವರು ಅಂಗಡ್ಯಾಗ ಹೋಗಿ ಕೇಳ್ತಾರ. ಇದಕ್ಕ ಏನು ಔಷಧ ಹೊಡಿಬೇಕು ಅಂತ. ಅವರು ಇಂಥದ್ದು ಹೊಡೀರಪ್ಪ ಅಂತ ಹೇಳಿದ್ದೇ ಅದನ್ನ ತಗಬಂದು ಹೊಡೀತಾರೆ.

ಪ್ರತಿ ದಿನ ಹೊಲಕ್ಕೆ ಹೋದರೆ ನಿನ್ನೆ ಗಿಡ ಹ್ಯಾಂಗಿತ್ತು, ಇವತ್ತು ಹ್ಯಾಂಗೈತಿ ಅಂತ ಎಲ್ಲ ಗೊತ್ತಾಗತೈತಿ. ದಿನಾ ಪುಷ್ಟಿಕರವಾಗಿದ್ದು ಇವತ್ತು ಜೋಲು ಮೊಕ ಹಾಕಿದೆ ಅಂದರ ನಮಗೆ ಯಾಕೆ ಗೊತ್ತಾಗಲ್ಲ, ಜರಿ ಹುಳ ಆದ್ರು ಅಂದ್ರ ಗಿಡ ಒಂಥರಾ ಆಗಿಬಿಡತ್ತೆ, ಬುಡಚು ರೋಗ ಐತಲ್ಲ ಅದು ಮಾತ್ರ ಗೊತ್ತಾಗಲ್ಲ. ಕಾಯಿರಲ್ಲ, ಮೊಗ್ಗಿರಲ್ಲ, ಏನೂ ಇರಲ್ಲ.

ನಾವು ಹೊಲದಾಗ ಹೋದಿವೆಂದರೆ ಬೆಳೆ ಮಧ್ಯ ತರಕಾರಿ ಹಾಕಿದ್ದು ಕಿತ್ತು ತರತೀವಿ. ತರಕಾರಿ ಹೆಚ್ಚತಾ ಹುಳ ಕಂಡರೆ ಹೊಲದಲ್ಲಿ ಈ ಹುಳ ಅದಾವು ಅಂತ ನಾವು ತಿಳಕಂತೇವು. 'ನೀವು ನೋಡೀರೋ ಇಲ್ರಿ, ತರಕಾರಿಯಾಗ ಹುಳ ಅದಾವು, ಸೊಪ್ಪಿನಲ್ಲಿ ಹುಳ ಅದಾವು' ಅಂತ ನಾವು ಅವರ ಗಮನಕ್ಕೆ ತರತೀವಿ. ಅವರು ಅದನ್ನೆಲ್ಲ ಗಮನಿಸಿರಲ್ಲ. ಮೊದಲು ಗೊತ್ತಾಗದು ಹೆಣಮಕ್ಕಳಿಂದಲೆ. ಪೂರಾ ಲಾಸಾದ ಮೇಲೆ ನೋಡಿಕೊಂತಾರೆ ಅವರು. ಆಗ ಓಡೋಗಿ ಔಷ್ಧ ತಂದು ಹೊಡೀತಾರ. ಈ ಔಷಧ ಅನ್ನದು ಗಂಡಸರ ಮನಸ್ಸಲ್ಲಿ ಬಂದು ಕುಂತುಕೊಂಡು ಬಿಟ್ಟದ.

ಮಕ್ಕಳು ಯಾವ ರೀತಿನೋ ಅದೇ ರೀತಿ ಈ ಗಿಡಗಳು ಕೂಡ. ಗಿಡದ ಜತೆ ನಮಗ ಟಚ್ ಇದ್ದಾಗ ಬಾಂಧವ್ಯ ಬಂದೇ ಬರುತ್ತದೆ. ಬಿತ್ತನೆಗೆ ಭೂಮಿಯನ್ನ ತಯಾರಿ ಮಾಡಕೊಂತೀವಿ. ವೇಸ್ಟ್ ಇದ್ದದ್ದನ್ನ ಆರಿಸಿ ಕ್ಲೀನ್ ಮಾಡಿಕೊಂಡು ತಯಾರಿ ಮಾಡಕೋತೀವಿ. ನಮ್ಮ ಮನಿ ಕೆಲಸದಂಗೆ ಅದನ್ನ ಅಷ್ಟು ಚನ್ನಾಗಿ ಮಾಡತೀವಿ. ಬಿತ್ತನೆ ಮಾಡಿದಾಗ ಅದಕ್ಕೂ ನಮಗೂ ಟಚ್ ಆಗುತ್ತೆ. ನಾವು ಮೊಗುನ ಎತ್ತಿಕಂಡಿರ್ತೀವಿ. ಅದು ಕಿಲ ಕಿಲ ನಗ್ತಾ ಇರತೈತಿ, ಅದಕ್ಕೆ ಏನೋ ಒಂದು ಸಂಕ್ಟ ಆಗಿರುತ್ತೆ, ನಮಗೆ ತಕ್ಷಣ ಅದು ತಿಳಿಯುತ್ತೆ. ಹಾಗೇ ಗಿಡಗಳು.

ನಾವು ಎಷ್ಟು ಹತ್ತಿರದಿಂದ ನಿಂತು ಭೂಮಿ ಜತೆ ಕೆಲಸ ಮಾಡ್ತೀವೋ ಅಷ್ಟು ಸಮೃದ್ಧಿ ಬರುತ್ತೆ. ಆ ಬೆಳೆಗೂ ನಮ್ಮ ಪ್ರೀತಿ ಬೇಕು. ಹೆಂಗಂತೀರಾ? ನಾವು ಹೊಲದ ತುಂಬಾ ಬೆಳೆ ನೋಡ್ತಾ ಅಡ್ಡಾಡ್ತಾ ಹೋಗ್ತಿರ್ತೀವಿ. ಅಲ್ಲಿ ಬೇರೆ ಯಾವುದೋ ಒಂದು ಗಿಡ ಹುಟ್ಟಿರ್ತೈತಿ, ತೆಗೀತೀವಿ. ಈ ಗಿಡ ಏನಾರ ಒಂಚೂರು ಬೇರು ಕಾಣಿಸಿದರೆ ಬಗ್ಗಿ ಮಣ್ಣು ಹಾಕಿ ಕಾಲಲ್ಲಿ ತುಳಿತೀವಿ. ಗಿಡದಲ್ಲಿ ಏನಾರ ಇದ್ರೆ ಅದನ್ನ ತೆಗೀತೀವಿ. ಅದೆಲ್ಲ ಅದಕ್ಕೆ ಗೊತ್ತಾಗತೈತಿ. ಕೈಮುಟ್ಟಿ ಮಾಡಬೇಕ್ರಿ. ಕೈಮುಟ್ಟಿ ಮಾಡಿದರೆ ಮಾತ್ರ ಅದಕ್ಕೆ ಆ ಸಂಬಂಧ ಬರದು.

## ಗಮನಿಸುವ ಬುದ್ಧಿ ಸಾವಯವ ಕೃಷಿಯಿಂದ ಬಂತು

ಇನ್ನೊಂದು ಮುಖ್ಯವಾದ ವಿಚಾರ ಇದೆ. ಈಗ ನಾವು ಸಾವಯವ ಕೃಷಿ ಸಂಘ ಅಂತ ಮಾಡಿದ ಮೇಲೆ ಮತ್ತಷ್ಟು ಜವಾಬ್ದಾರಿಯಿಂದ ನೋಡಿದ್ದನ್ನ ಗುರುತಿಸೋದು ಎಲ್ಲ ಶುರುವಾಗಿದೆ. ನಮ್ಮ ತಿಂಗಳ ಸಭೆಯಲ್ಲಿ ನಾಕುಕಡೆ ರೈತರನ್ನ ಕರೆಸದು, ಹೊಸ ವಿಚಾರಗಳನ್ನ ಹೇಳಿಸುವುದು ಎಲ್ಲ ಮಾಡುವುದರಿಂದ ನಮಗೆ ಈಗ ಹೆಚ್ಚಿನ ಅರಿವು ಬಂದದ. ಮೊದಲಂದರ ನಮಗ ಇದೆಲ್ಲ ಅಷ್ಟೊಂದು ಮನದಟ್ಟಾಗ್ತಾ ಇರಲಿಲ್ಲ. ಹೊಲಕ್ಕೆ ಹೋದರೆ ನಮ್ಮ ಪಾಡಿಗೆ ಕೆಲಸ ಮಾಡಿ ಮನೆಗೆ ಬರ್ತಾ ಇದ್ದೆವು. ಬಿತ್ತಕ್ಕೆ ಹೋಗಿ ಅಂದರ ಹೋಗತಿದ್ವಿ, ಕಳೆ ತೆಗೆದು ಬನ್ನಿ ಅಂದರ ಕಳೆ ತೆಗೆದು ಬರತಿದ್ವಿ, ಈಗ ರೋಗ ಅಂದರೆ ಏನು, ಹುಳ ಅಂದರೆ ಏನು, ಅದನ್ನ ಹ್ಯಾಂಗ ಗುರುತಿಸಬೇಕು ಅನ್ನದು ಮತ್ತಷ್ಟು ಕುತೂಹಲ ಮೂಡದ. ಈಗ ಹೊಲಕ್ಕೆ ಹೋದೆವೆಂದರ ಮೊದಲು ಗಿಡ ಎತ್ತಿ ನೋಡತೇವು. ನಾವು ಹೆಣಮಕ್ಕಳು ಕೂಡ್ಕ್ಯಂದು ಅದರ ಬಗ್ಗೆ ಮಾತನಾಡಿಕೊಂತೇವು. ಅಲ್ಲಿ ನೋಡ್ಕ ಬಂದಿದ್ದೆವಲ್ಲ ಅದನ್ನ ಮಾಡೂನು, ತ್ರಿಮೂರ್ತಿ ಟಾನಿಕ್ ಮಾಡಿದರೆ ಚನ್ನಾಗಿರ್ತದ ಅಂತ ನಮ್ಮ ನಮ್ಮಲ್ಲೆ ಬಂದು ಬಿಡತೈತಿ.

ಯಾವುದೊ ರೋಗ–ಕೀಟ ಬಿದ್ದದ, ನಾವು ಅದಕ್ಕೆ ಇಂಥ ಕಶಾಯ ಮಾಡಬೇಕು ಅಂತ ಈಗ ಎಲ್ಲ ತಕ್ಷಣ ಮಾಡುತ್ತೀವಿ, ತರೋದಿದ್ದರೆ ಗಂಡಮಕ್ಕಳ ಕೈಲೂ ತರಸತೀವಿ.

ರಾಸಾಯನಿಕ ಹೊಡೀಬೇಕು ಅಂದರೆ ಅವರು ಅಂಗಡಿಯವನ ಹತ್ತಿರ ರೋಗರ್‍ರೋ ಪಾಗರ್‍ರೋ ತಂದು ಹೊಡೀತಾರೆ. ಅದೇ ಸಾವಯವ ಆದಾಗ ನಮಗೆ ಹೆಂಗಸರಿಗೆ ಗೊತ್ತಿರುತ್ತೆ. ಯಾವ ಕಶಾಯ ಮಾಡಬೇಕು? ಬೇವಿನೆಣ್ಣೆ ಹೊಡೀಬೇಕು ಅಂತ. ನಾವು ತಯಾರು ಮಾಡಿ ಕೊಡುತ್ತೇವೆ. ಅವರು ಹೊಡೀತಾರ. ಕೆಲಟೈಮು ನಾವೂ ಹೊಡೀತೇವು. ಕ್ಯಾನ್ ಇಲ್ಲದಿದ್ದರೆ ಎಲೆ ಗುಚ್ಚದಿಂದ ಸಿಂಪಡಣೆ ಮಾಡಬಹುದು.

*Edited, Printed, Published and owned by Rajeshwari H.S., No. 114/5, 9th Cross 2nd Main, Chamarajpet, Bangalore - 560 018.*

*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*

*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*




ರಾಸಾಯನಿಕ ಔಷ್ಧಿ ಹೊಡೀತಾ ಇದ್ದಾಗ ನಮಗೆ ಇದೆಲ್ಲ ಗೊತ್ತಾಗ್ತಾ ಇರಲಿಲ್ಲ. ಅದರ ಬಗ್ಗೆ ನಮಗೆ ತಿಳಿವಳಿಕೆ ಇರಲಿಲ್ಲ.

### ಕೃಷಿಯಲ್ಲಿ ವಿಷವಿದ್ದಾಗ ಭಯವಿತ್ತು

ರಾಸಾಯನಿಕ ಬಳಸುವಾಗ ನಮಗೆ ಕೃಷಿಯಲ್ಲಿ ಅಂಥಾ ಆಸಕ್ತಿಯೇ ಇರಲಿಲ್ಲ. ಮೊದಲನೆಯದಾಗಿ ಅದು ವಿಷದ ಔಷ್ಧಿ. ಗಂಡಸುಮಕ್ಕಳು ಮುಖಕ್ಕೆ ಕಟ್ಟಿಕೊಂಡು ಹೊಡೀತಾರೆ. ನಾವ್ಯಾಕೆ ಅದರಲ್ಲಿ ಹೋಗಿ ಇಲ್ಲದ ಪ್ರಾಬ್ಲಮ್ ಮಾಡಿಕೊಳ್ಳೋಣು. ನಮಗೆ ಅದರ ಕಾಳಜಿ ಇಲ್ಲ.

ನಮ್ಮ ಗಂಡುಮಕ್ಕಳು ಔಷಧ ಹೊಡೆಯುವಾಗ ನಾವೆಷ್ಟು ಕಾಳಜಿ ಮಾಡಬೇಕು. ಸೋಪು ಹಾಕಿ ಚನ್ನಾಗಿ ಕೈ ತೊಳೀಬೇಕು. ಅದೇನಾದರೂ ಸ್ವಲ್ಪ ಉಳಕಂಡು ಹೊಟ್ಯಾಗ ಹೋದರೆ... ಅನ್ನೋ ಭಯ.

ಈ ಥರ ಭಯ ಇತ್ತಲ್ಲ, ಅದಕ್ಕೆ ಅದರಲ್ಲಿ ನಾವು ಕಾಲು ಇಕ್ಕತಿರಲಿಲ್ಲ. ಹೊರಗಿಂದಲೇ ಒಯ್ದು ಬಿಡುವರೆ  ಹೊರತು ಅದನ್ನ ನಾವು ನಮ್ಮ ಮನಿ ಒಳಗ ಬಿಟ್ಟುಕೊಂತ ಇರಲಿಲ್ಲ. ಅದನ್ನ ಮನ್ಯಾಗ ಇಟ್ಟರೂ ಭಯ. ಮ್ಯಾಕ ಅವತು ಇಡದು, ಇಲ್ಲ ಚನ್ನಾಗಿ ಕಟ್ಟಿ ಇಡದು. ತಾಯಿ ಮಕ್ಕಳಲ್ಲಿ ಯಾರಾರ ಜಗಳ ಮಾಡಿಕೊಂಡರು ಅಂದ್ರ ಸಿಟ್ಟಲ್ಲಿ, 'ತಗಬಾ ವಿಷ ಐತಲ್ಲ' ಅಂತ ಕುಡದು ಬಿಡದು. ಏಸೋ ಕೇಸುಗಳು ಈ ಥರ ಆಗ್ಯಾವ. ಇದರಿಂದ ನಮಗ ಒಂದು ಸಣ್ಣ ಜಗಳ ಆದರೂ ಭಯ.

ಡಿ.ಸಿ.ಎಚ್ ಹತ್ತಿಗೆ ಬಹಳ ಹೊಡಿತಾರ ಇದನ್ನ. ಅದರ ಗಿಡ ಸ್ವಲ್ಪ ಎತ್ತರ ಇರತ್ತೈತಿ.  ಮುಂದಕ್ಕ ಇಟಕಂಡು ಸ್ಪ್ರೇ ಮಾಡಬೇಕಾದರ ಅದು ಮೂಗಿಗೆ ಹೋಗತಿರತದ, ಮೊಕ-ಮೈಗೆಲ್ಲ ಸಿಡಿತಿರ್ತದ. ಅದನ್ನ ಹೊಡಿತಾನೆ ನಮ್ಮಲ್ಲಿ ಒಬ್ಬ ಸತ್ತು ಹೋದ. ಮೈ ಕಣ ಕಣಕೆಲ್ಲ ವಿಷ ಸೇರಿಕೊಂಡು ಬಿಟ್ಟಿತ್ತು. ಒಟ್ಟು ಏನಾತೋ, ಹೊಡೆಯಕ್ಕೆ ಹೋದವನು ಮನಿಗೆ ಬಂದಿಲ್ಲ.

ಇಷ್ಟೊಂದು ಅಪಾಯ ಇದ್ರೂನು ಕೂಡ ಅದನ್ನ ಬಿಡತಿದ್ದಿಲ್ರಿ ಗಂಡು ಮಕ್ಕಳು.  ಹುಳ ಕಂಡ ತಕ್ಷಣ ಕಷ್ಟ ಪಡಲಾರದೆ, ಗಡ ಗಡ ಹೋಗದು, ಔಷಧಿ ತಂದು ಹೊಡ್ದು ಬರದು. ಆಗ ಅವರು ಹೆಂಗಸರ ಮಾತನ್ನ ಕೇಳುತ್ತಿರಲಿಲ್ಲ. ಯಜಮಾನರುಗಳು ಹೇಳಿದ್ದನ್ನೂ ಕೇಳುತ್ತಿರಲಿಲ್ಲ. 'ಸುಣ್ಣ ಬೂದಿ ಅದಕ್ಕೆಲ್ಲ ಹೋಗಂಗಿಲ್ಲ' ಅಂತ ವಿಷವನ್ನೇ ಹೊಡೆದು ಬಿಡುತ್ತಿದ್ದರು. ಮನೆ ಮುಂದೆ ಒಂದು ಬಳ್ಳಿ ಹಾಕಿದ್ದರೂ ಅದಕ್ಕೂ ವಿಷ. ಅದು ಅಪಾಯಕಾರಿ ಅಂತ ಗೊತ್ತಿದ್ದೂ ಅದನ್ನ ಬಳಸುತ್ತಿದ್ದರು.

ರಾಸಾಯನಿಕ ಬಳಸುತ್ತಿದ್ದಾಗ ಮನೆಯಲ್ಲಿ ಒಂದು ಭಯದ ವಾತಾವರಣ ಇರುತ್ತಿತ್ತು. ಗಂಡುಮಕ್ಕಳು ಹೊಡೆದು ಮನೆಗೆ ಬರೋತನ ನಮಗೆ ಭಯ. ಬದುಕಕ್ಕೋಸ್ಕರ ನಾವು ಕೃಷಿ ಮಾಡದು. ಇದರಲ್ಲೆ ಒಂದು ಭಯ ವಾತಾವರಣ ಇದೆ ಅಂದರೆ! ಅಷ್ಟಿದ್ದೂ ಅದನ್ನ ಬಿಡತ್ತಿರಲಿಲ್ಲ ಅವರು.

ಕೃಷಿಯಲ್ಲಿ ನಮಗೆ ಈಗಿನ ಉತ್ಸಾಹ ಆಗ ಇದ್ದಿಲ್ಲ. ನಾವು ಕೃಷಿಯಲ್ಲಿ ಮುಂಚೆ ಅಷ್ಟು ಕೆಲಸ ಮಾಡುತ್ತಾ  ಇದ್ರೂನೂ ಈಗಿರುವಂಥ ತಿಳಿವಳಿಕೆ ಇರಲಿಲ್ಲ. ಸಾವಯವ ಕೃಷಿ ಸಂಘ ಮಾಡಿದ್ದರಿಂದ ನಮಗೆ ಈ ಥರ ತಿಳಿವಳಿಕೆ ಬಂದಿದೆ, ಆಸಕ್ತಿ ಬಂದಿದೆ. ಒಂದು ವೇಳೆ ಸಂಘದಲ್ಲಿ ರಾಸಾಯನಿಕ ಕೃಷಿ ಮಾಡಬೇಕು ಅಂದಿದ್ದರೆ ನಮಗೆ ಆಸಕ್ತಿ ಬರುತ್ತಿರಲಿಲ್ಲ. ಯಾಕೆಂದರ, ನಮ್ಮ ಗಂಡಸುಮಕ್ಕಳು ಅಂಗಡಿಯಿಂದ ದುಡ್ಡುಕೊಟ್ಟು ತಂದು ಹೊಡಿತಾರ. ಸಂಘದಲ್ಲೂ ಅದನ್ನೇ ಹೇಳ್ತಾರ, ಅಂದರ ನಾವು ಯಾಕೆ ಕೇಳಬೇಕು.

ಊರಲ್ಲಿ ನಮ್ಮದೇ ಆದ ಸಂಘ ಮಾಡಿರೋದ್ರಿಂದ, ತಿಂಗಳ ತಿಂಗಳು ತಾಲೂಕು ಮಟ್ಟದಲ್ಲಿ 'ಪ್ರಯೋಗ ಪರಿವಾರ'ದ ಸಭೆಗೆ ಎಲ್ಲ ಹಳ್ಳಿಯಿಂದ ಜನ ಬರೋದು, ಬೇರೆ ಕಡಿಲಿಂದ ಕರಸಿರೋದ್ರಿಂದ, ಮತ್ತೆ ನಾವು ಅದನ್ನ ಸ್ವತಃ ಪರೀಕ್ಷೆ ಮಾಡಿ ನೋಡ್ತೋದ್ರಿಂದ ನಮಗೆ ಇದೆಲ್ಲ ಹೇಗೆ ಕೆಲ್ಸ ಮಾಡುತ್ತೆ ಅನ್ನೋದು ಗೊತ್ತಾಗುತ್ತ.

### ಕೆಲಸ ಹಗುರ ಮಾಡುವ ಉಪಾಯಗಳಿವೆಯೇ?

ಸಾವಯವ ಕೃಷಿ ಮಾಡುವಾಗ ನಮಗೆ ಹಿಂದೆ ಇದ್ದ ಕೃಷಿಗಿಂತ ಸಂತೋಷ ಇದೆ. ಆದರೆ ಅಲ್ಲಿ ಇರೋ ಕಷ್ಟಗಳನ್ನ ಕಡಿಮೆ ಮಾಡೋ ಕಡೆಗೂ ನಾವು ಯೋಚನೆ ಮಾಡಬೇಕಲ್ಲ. ನಮಗೆ ಕೈಮುಟ್ಟಿ ಮಾಡದೆ ಬದುಕು ಯಾವುದು ಇಲ್ಲ. ಹತ್ತಿ ಬಿಡಿಸುವುದು ಒಂದು ಬದುಕು. ಅದನ್ನ ನಾವು ಕಡಿಮೆ ಮಾಡದು ಸಾಧ್ಯನೆ ಇಲ್ಲ. ಒಂದು ವೇಳೆ ನಾವು ಮಾಡದಿದ್ದರೆ ಅವು ಹಂಗ ಹೊಲದಾಗೆ ಉಳಿದು ಬಿಡ್ತಾವು. ಎಂಟು ದಿನ ಬಿಟ್ಟು ಬಿಟ್ಟರೆ ಅದರಲ್ಲಿ ಕಸ ಸೇರಿ ಏನಕ್ಕೂ ಬರದಂತೆ ಆಗುತ್ತ. ಇನ್ನು ಬೇರೆ ಬೆಳೆ ಬೆಳೆಯಕ್ಕೆ ಅದರಲ್ಲಿ ಬರಾಣಿಲ್ಲ.

ಈಗ ಅನೇಕ ಕೆಲಸಗಳಿಗೆ ಸಲಕರಣೆ ಮಾಡಿದ್ದಾರೆ. ಶೇಂಗಾ ಸುಲಿಯಕ್ಕೆ ಮಿಷನ್ ಇದೆ. ಕಾಲಿಂದ ಒತ್ತಿ ಸುಲಭವಾಗಿ ನೀರು ತೆಗೆಯುವಂಥ ಟ್ರೆಡಲ್ ಪಂಪ್ ಇದೆ. ನಾಟಿ ಹಾಕೋದಕ್ಕೂ ಯಂತ್ರ ಕಂಡು ಹಿಡಿದಿದ್ದಾರೆ (ಅದನ್ನ ಹೆಂಗಸರು ಒಪ್ಪಿಕೊಂಡಿಲ್ಲ). ಕಳೆ ತೆಗೆಯೋದಕ್ಕೂ ಯಂತ್ರ ಇದೆ. ಅದೇ ಥರ ಬಗ್ಗಿ ಹತ್ತಿ, ಶೇಂಗಾ ಕುಯ್ಯುವ ಕೆಲಸಕ್ಕೆ ಏನಾದರೂ ಯಂತ್ರ ಯಾಕೆ ಕಂಡುಹಿಡಿಯಬಾರದು?

ನಮ್ಮ ಹೆಂಗಸರು ಯಂತ್ರಗಳನ್ನ ಒಪ್ಪುದಿಲ್ಲ. ಯಾಕೆ ಒಪ್ಪುದಿಲ್ಲ ಅಂದರ, ನಮಗ ಬದುಕು ನೀಟಾಗಬೇಕು. ಬದುಕು ನೀಟಾಗುವಂಥ ಯಂತ್ರ ಆದರೆ ಎಲ್ಲರೂ ಒಪ್ಪತಾರ. ಹೊಲದಾಗ ನೀಟ್ ಆಗಲಿಲ್ಲ ಅಂದರ ಅದನ್ನ ಹಚ್ಚಿ ಏನ್ ಮಾಡ್ತೀ? ಅದಕ್ಕೇ ಕೈಮುಟ್ಟಿ ಮಾಡಿ ಬಿಡುವುದೇ ನಮಗೆ ರೂಢಿ. ನಾವು ಟೈಮಿದ್ದಾಗ ಕುರ್ಚಿ ಹಿಡಕಂದು ಕಳೆ ತಕ್ಕೋತಾ ಇರ್ತೀವಿ. ಅಲ್ಲಿ ಒಂದು ಹುಲ್ಲು ಕಡ್ಡಿನು ಬಿಡಲ್ಲ. ಕೈಯಾಗ ಎಲ್ಲ ತೆಗೆದು ದುಂಡಗ ಹಾಕತೀವಿ. ಹಂಗ ಹೊಲ ಕ್ಲೀನ್ ಆಕ್ಕತ್ತ ಕಳೆ ತೆಗೆದರೆ, ಯಂತ್ರಾದಾಗ ಹಿಂಗ್ ಹಿಂಗ್ ಮಾಡಕೊಂತ ಹೋದರೆ ಅಲ್ಲಲ್ಲಿ ಅಷ್ಟಷ್ಟು ಹಂಗೇ ಇರತದ. ನಮಗ ಅದು ತೃಪ್ತಿ ಅನ್ನಿಸಲ್ಲ. ಅದಕ್ಕ ನಾವು ಯಂತ್ರಗಳನ್ನ ಒಪ್ಪಲ್ಲ. ನಮಗೆ ಎಲ್ಲ ಕೈಯಲ್ಲಿ ಮಾಡಿ ಅಭ್ಯಾಸ.

ಹಿಂದೆ ಜೋಳ ಹೊಡಿಬೇಕಾದರೆ ಗುಂಡು ಹೊಡೆಯೋರು. ನಾವು ಈಗ ಮಿಲ್ಲಿಗಾಕುಸ್ತೇವು. ನಮ್ಮ ಹಿರಿಯರು ಇದನ್ನ ಒಪ್ಪೂದಿಲ್ಲ. ಎಲ್ಲ ಗಾಳಿಲಿ ಹೋಗಿಬಿಡುತ್ತೆ ಅಂತಾರ. ಹೊಲದಲ್ಲಿ ಬೆಳೆ ಬಂತಂದ್ರೆ ಕಣ ಕೆತ್ತೋರು. ಕಣ ಕೆತ್ತಿಸಿ ಅದಕ್ಕೆ ನೀರಾಕಿ ಬೆಳಿಗ್ಗೆ 8-10 ಎತ್ತುಗಳು ಕಟ್ಟಿಬಿಟ್ಟು ಚನ್ನಾಗಿ ತುಳಿಸವ್ರು, ಅದಕ್ಕೆ ಆನಂತರ ರೌಂಡುಗಲ್ಲು ಹೊಡಸಿ ನೆಲ ಸಾರಿಸವ್ರು, ಹಂಗ ಮಾಡಿದರ ಜೋಳ ಹಳ್ಳಾಗಿರ್ತಾವು.

(ಮುಂದುವರಿಯುವುದು)

'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

## ಸಹೃದಯ ಓದುಗರಲ್ಲಿ

**ಯಾ**ವುದೇ ಚಳವಳಿ ಸ್ವಾಯತ್ತತೆಯನ್ನು ಉಳಿಸಿಕೊಂಡಾಗ ಮಾತ್ರ ಶಕ್ತಿಯುತವಾಗಲು ಸಾಧ್ಯ. ಮಾನಸ ಸ್ವಾಯತ್ತ ಪರಿಕಲ್ಪನೆಯನ್ನು ತಾನಿಡುವ ಪುಟ್ಟ ಹೆಜ್ಜೆಯಲ್ಲೂ ಜಾರಿಗೆ ತರಲು ಪ್ರಯತ್ನಿಸಿದೆ. ಇದುವರೆಗೂ ಮಾನಸದ ಸಭೆಗೆ ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳು ಆಸರೆಯಾಗಿದ್ದವು. ಮಾನಸಕ್ಕೆ ತನ್ನದೇ ಆದ ಒಂದು ಕಛೇರಿ ಮಾಡಬೇಕೆಂಬ ಕನಸು ಈಗ ನನಸಾಗಿದೆ. ಈ ಕೆಳಗಿನ ವಿಳಾಸದಲ್ಲಿ ಮಾನಸಕ್ಕೆ ಒಂದು ಪುಟ್ಟ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದೇವೆ. ಬಾಡಿಗೆ 1600/-. ಇದು ನಮಗೆ ಹೊರೆಯಾದರೂ, ಮಾನಸ ಸದಸ್ಯರಿಂದ ಸಂಗ್ರಹಿಸುತ್ತಿದ್ದೇವೆ. ಸಹೃದಯರು ಬಾಡಿಗೆ ಹಣವನ್ನು ಕೊಡುಗೆಯಾಗಿ ನೀಡುವುದರ ಮೂಲಕ ನಮ್ಮ ಈ ಪ್ರಯತ್ನಕ್ಕೆ ನೆರವು ನೀಡಬೇಕೆಂದು ಕೋರುತ್ತೇವೆ. ಕೊಡುಗೆ ನೀಡಿದವರ ಹೆಸರುಗಳನ್ನು ಮಾನಸದಲ್ಲಿ ಪ್ರಕಟಿಸಲಾಗುವುದು.

***ನೀವು ಮಾನಸಕ್ಕೆ ಹೀಗೆ ಸಹಕರಿಸಬಹುದು :***

- ಪತ್ರಿಕೆಗೆ ಚಂದಾದಾರರಾಗುವುದರ ಮೂಲಕ
- ಮಾನಸ ವೇದಿಕೆಗೆ ಸದಸ್ಯರಾಗುವುದರ ಮೂಲಕ
- ಕವನ, ಲೇಖನ, ವರದಿ, ಮುಂತಾದವುಗಳನ್ನು ಕಳಿಸಿಕೊಡುವುದರ ಮೂಲಕ
- **ಪತ್ರಿಕೆಯನ್ನು ಪ್ರಾಯೋಜಿಸುವುದರ ಮೂಲಕ**

***ಸಂಪಾದಕ ಮಂಡಳಿ***

*Posted on 9th of every month*
*at Chamarajpet Post Office*

Registered
Magazine

*ವಿಳಾಸ :*
ನಮ್ಮ ಮಾನಸ
34/1, 2ನೇ ಕ್ರಾಸ್, ಆಜಾದ್ ನಗರ,
ಚಾಮರಾಜಪೇಟೆ, ಬೆಂಗಳೂರು - 560 018